ಭಾಸನ

# ಭಾರತ ಚಕ್ರ

(ಏಕಾಂಕ ನಾಟಕಗಳು, ಪಂಚರಾತ್ರ)

ಎಲ್. ಗುಂಡಪ್ಪ, ಎಂ ಎ.

ಸತ್ಯಶೋಧನ ಪ್ರಕಟನ ಮಂದಿರ,
ಕೋಟೆ, ಬೆಂಗಳೂರು ನಗರ.

# ಭಾಸನ ಏಕಾಂಕ ನಾಟಕಗಳು

ಎಲ್. ಗುಂಡಪ್ಪ, ಎಂ ಎ

ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು
೧೯೪೫

# ಪೀಠಿಕೆ

## ಎರಡನೆಯ ಮುದ್ರಣ

ಈ ಪುಸ್ತಕದ ಮೊದಲನೆಯ ಮುದ್ರಣದ ಪ್ರತಿಗಳು ಮುಗಿದು ಎರಡು ವರ್ಷದ ಮೇಲಾಯಿತು. ಅಂದಿನಿಂದಲೂ ಪ್ರತಿಗಳಿಗಾಗಿ ಕೋರಿಕೆಪತ್ರಗಳು ಮೇಲಿಂದ ಮೇಲೆ ಬರುತ್ತಿದ್ದರೂ ನಾನಾ ಕಾರಣಗಳಿಂದ ಎರಡನೆಯ ಮುದ್ರಣವನ್ನು ಇನ್ನೂ ಮುಂಚಿತವಾಗಿ ಪ್ರಕಟಿಸಲು ಸಾಧ್ಯವಾಗಲಿಲ್ಲ. ಕಾಗದ ಮೊದಲಾದ ಮುದ್ರಣ ಸಲಕರಣೆಗಳಿಗೆ ಬಿಕ್ಕಟ್ಟೊದಗಿ ಪುಸ್ತಕದ ಅಂದಚೆಂದಕ್ಕೂ ಕುಂದು ತಟ್ಟಿತು. ಇದೆಲ್ಲ ಕಾಲದೋಷದಿಂದ ಆದದ್ದೆಂದು ಸಮಾಧಾನ ತಂದುಕೊಳ್ಳಬೇಕಾಗಿದೆ.

ನಾಡಿನ ಹಲವು ಹಿರಿಯ ವಿದ್ವಾಂಸರು ಈ ಭಾಷಾಂತರವನ್ನು ಮೆಚ್ಚಿ ಪ್ರೋತ್ಸಾಹಿಸಿದ್ದಾರೆ. ನುರಿತ ವಿಮರ್ಶಕರು ಗುಣದೋಷಗಳನ್ನು ಚರ್ಚಿಸಿ ಸಾರಗ್ರಹಣಕ್ಕೆ ಸಹಾಯ ಮಾಡಿದ್ದಾರೆ; ಒಳ್ಳೆಯ ಸಲಹೆಗಳನ್ನು ಕೊಟ್ಟು ನೆರವು ನೀಡಿದ್ದಾರೆ. ಕೆಲವು ರಸಿಕರು ಇಲ್ಲಿನ ಕೆಲವು ನಾಟಕಗಳನ್ನು ಅಭಿನಯಿಸಿ ಆನಂದಪಟ್ಟಿದ್ದಾರೆ, ಆನಂದಪಡಿಸಿದ್ದಾರೆ. ಮೈಸೂರು, ಮದರಾಸು ಮತ್ತು ಆಂಧ್ರ ವಿಶ್ವವಿದ್ಯಾನಿಲಯಗಳ ಅಧಿಕಾರಿಗಳು ಈ ಪುಸ್ತಕವನ್ನು ತಮ್ಮ ವಿದ್ಯಾನಿಲಯಗಳಲ್ಲಿ ಕಾಲೇಜು ತರಗತಿಗಳಿಗೆ ಪಠ್ಯಪುಸ್ತಕವಾಗಿ ನಿಯಮಿಸಿ ಗ್ರಂಥದ ಯೋಗ್ಯತೆಯನ್ನು ಮನ್ನಿಸಿದ್ದಾರೆ. ದೇವರಾಜ ಬಹದ್ದೂರ್ ಧರ್ಮನಿಧಿಯ ಸಾಹಿತ್ಯ ಶಾಖೆಯವರು ೧೯೩೩ನೆಯ ಇಸವಿಯಲ್ಲಿ ಈ ಗ್ರಂಥಕ್ಕೆ ೩೦೦ ರೂಪಾಯಿ ಬಹುಮಾನ ಕೊಟ್ಟು ಗೌರವಿಸಿದ್ದಾರೆ. ಈ ಎಲ್ಲರಿಗೂ ಈ ಮೂಲಕ ವಂದನೆ ಸಲ್ಲಿಸುತ್ತೇನೆ.

೨೫—೫—೧೯೪೫ ಎಲ್. ಗುಂಡಪ್ಪ

## ಮೊದಲನೆಯ ಮುದ್ರಣ

ಕವಿಸಾರ್ವಭೌಮನೆನಿಸಿದ ಕಾಳಿದಾಸನು ನಾಟಕರಚನೆಗೆ ಕೈಹಾಕುವ ಮೊದಲು ತನ್ನ ಕಾಲದಲ್ಲಿ ಪ್ರಖ್ಯಾತರಾಗಿದ್ದ ಪುರಾತನ ಕವಿಗಳನ್ನು ಗೌರವಪೂರ್ವಕವಾಗಿ ಸ್ಮರಿಸಿದ್ದಾನೆ. ಅಂಥ ದೊಡ್ಡ ಪ್ರಾಚೀನ ಕವಿಗಳ ಗ್ರಂಥಗಳಿರುವಾಗ ತನ್ನಂಥ ಹೊಸ ಕವಿಗೆ ಆದರ ದೊರೆಯುವುದು ಹೇಗೆಂದು ಸ್ವಲ್ಪ ಅಧೈರ್ಯದಿಂದಲೇ ಕೇಳಿದ್ದಾನೆ. ಅವನು ಅಷ್ಟುಮಟ್ಟಿಗೆ ಗೌರವಿಸಿರುವ ಕವಿಗಳಲ್ಲಿ ಭಾಸನೇ ಮೊದಲನೆಯವನು.

ಕಾಳಿದಾಸನ ಕಾಲದಿಂದ ಈಚೆಗೆ ಬಾಳಿದ ಬಾಣ, ದಂಡಿ, ರಾಜಶೇಖರ ಮುಂತಾದ ಇತರ ಕೆಲವು ಕವಿಗಳೂ, ಭಾಮಹ ಮುಂತಾದ ಲಾಕ್ಷಣಿಕರೂ ಭಾಸನನ್ನು ಶ್ಲಾಘಿಸಿ, ಅವನ ಗ್ರಂಥಗಳನ್ನು ಹೊಗಳಿ ವಿಮರ್ಶೆಮಾಡಿ ಬರೆದಿದ್ದಾರೆ. ಇದರ ಜೊತೆಗೆ ಸುಭಾಷಿತಾವಳಿ ಮುಂತಾದ ಕೆಲವು ಶ್ಲೋಕಸಂಗ್ರಹಗಳಲ್ಲಿ ಭಾಸನ ಗ್ರಂಥಗಳಿಂದ ಶ್ಲೋಕಗಳು ಉದ್ಧೃತವಾಗಿವೆ. ಇಷ್ಟಾದರೂ ಭಾಸ ಕವಿಯ ಗ್ರಂಥಗಳಲ್ಲಿ ಒಂದಾದರೂ ಬಹುಕಾಲದಿಂದಲೂ ಪ್ರಚಾರದಲ್ಲಿರಲಿಲ್ಲ. ಆದ್ದರಿಂದ ಕಾಳಿದಾಸಾದಿಗಳ ಮಾತಿನಿಂದ ಮಾತ್ರ ಭಾಸನೆಂಬ ಒಬ್ಬ ಕವಿಶ್ರೇಷ್ಠನಿದ್ದನೆಂದು ಊಹಿಸಬೇಕಾಗಿದ್ದಿತು.

ಈಚೆಗೆ ೧೯೧೦ನೆಯ ಇಸವಿಯಲ್ಲಿ ತಿರುವಾಂಕೂರು ಸಂಸ್ಥಾನದ ಶ್ರೀ. ಟಿ ಗಣಪತಿಶಾಸ್ತ್ರಿಗಳಿಗೆ ೧೩ ನಾಟಕಗಳು ಸಿಕ್ಕಿದವು. ಅವರು ಆ ನಾಟಕಗಳನ್ನು ಹಲವು ಬಗೆಯಲ್ಲಿ ಪರೀಕ್ಷಿಸಿ ಅವೆಲ್ಲವೂ ಭಾಸನೇ ರಚಿಸಿದವೆಂದು ನಿರ್ಧರಿಸಿ ಪ್ರಕಟಮಾಡಿದರು. ಆ ನಾಟಕಗಳನ್ನೋದಿದ ವಿದ್ವಾಂಸರಲ್ಲಿ ಬಹುಮಂದಿ ಶ್ರೀ. ಗಣಪತಿಶಾಸ್ತ್ರಿಗಳ ಅಭಿಪ್ರಾಯವನ್ನೇ ಅನುಮೋದಿಸಿ ಅವು ಭಾಸನ ಗ್ರಂಥಗಳೇ ಇರಬಹುದೆಂದು ಒಪ್ಪಿಕೊಂಡರು. ಕೆಲವರು ಮಾತ್ರ ಆ ಮತವನ್ನೊಪ್ಪದೆ ಪ್ರತಿಭಟಿಸಿದರು

ಈ ರೀತಿಯ ಭಿನ್ನಾಭಿಪ್ರಾಯಕ್ಕೆ ಕಾರಣವುಂಟು. ಭಾಸನು ರಚಿಸಿದವೆಂದು ಪ್ರಕಟವಾಗಿರುವ ಈ ನಾಟಕಗಳಲ್ಲಿ ಒಂದರಲ್ಲಿಯಾದರೂ ಕವಿಯ ಹೆಸರಿಲ್ಲ. ಅವನ ಕಾಲದೇಶಗಳನ್ನು ಎಲ್ಲಿಯೂ ಸ್ಪಷ್ಟವಾಗಿ

ಹೇಳಿಲ್ಲ ಆದ್ದರಿಂದ ಅವುಗಳಲ್ಲಿ ಪರಸ್ಪರವಾಗಿ ಕಂಡುಬರುವ ಹೋಲಿಕೆಗಳಿಂದ ಅವೆಲ್ಲವೂ ಒಬ್ಬನೇ ಬರೆದ ಗ್ರಂಥಗಳೆಂದು ಗೊತ್ತು ಮಾಡಿ, ಭಾಸನ ವಿಷಯದಲ್ಲಿ ಹಿಂದಿನ ಕವಿಗಳೂ ಲಾಕ್ಷಣಿಕರೂ ಹೇಳಿರುವ ಮಾತುಗಳು ಈ ನಾಟಕಗಳಿಗೆ ಹೊಂದುವುವೆಂದು ತೋರಿಸಿ, ಭಾಷೆಯ ಪ್ರಾಚೀನ ಸ್ವರೂಪ, ನಾಟಕಗಳಲ್ಲಿ ಹೊರಸೂಸುವ ಕವಿಯ ಸಾಮರ್ಥ್ಯ—ಇವುಗಳ ಆಧಾರದಿಂದ ಇವೆಲ್ಲವೂ ಕಾಳಿದಾಸನಿಂದ ಶ್ಲಾಘನೆಯನ್ನು ಹೊಂದಿದ ಭಾಸಮಹಾಕವಿಯೇ ಬರೆದ ಗ್ರಂಥಗಳೆಂದು ನಿರ್ಧರಿಸಿದರು ಹೀಗೆ ಗ್ರಂಥಕರ್ತನಿಂಥವನೆಂಬುದು ನಾಟಕಗಳಲ್ಲಿಲ್ಲದೆ ಊಹೆಯ ಆಧಾರದಿಂದ ಅದನ್ನು ನಿರ್ಧರಿಸಬೇಕಾದ್ದರಿಂದ ವಿವಾದಕ್ಕೆ ಆಸ್ಪದವಾಯಿತು.

ಪ್ರತಿಪಕ್ಷದವರು ಇವು ಆ ಪ್ರಸಿದ್ಧನಾದ ಹಿಂದಿನ ಭಾಸಕವಿಯ ಗ್ರಂಥಗಳಲ್ಲವೆಂದೂ, ಸುಮಾರು ಕ್ರಿ ಶ ೭ರಿಂದ ೧೦ನೆಯ ಶತಮಾನದ ವರೆಗಿನ ಮಧ್ಯಕಾಲದಲ್ಲಿ ಕೇರಳದೇಶದವರಾರೋ ಇವನ್ನು ರಚಿಸಿರ ಬೇಕೆಂದೂ ಅಭಿಪ್ರಾಯಪಡುತ್ತಾರೆ ಇತರ ಗ್ರಂಥಗಳಲ್ಲಿ ಉದ್ಧರಿಸಿ ಬರೆದಿರುವ ಭಾಸನ ಶ್ಲೋಕಗಳು ಈ ಹದಿಮೂರು ನಾಟಕಗಳಲ್ಲಿ ದೊರೆ ಯುವುದಿಲ್ಲ, ಈ ಎಲ್ಲ ನಾಟಕಗಳಲ್ಲಿಯೂ ಭಾಷಾ ಶೈಲಿಯು ಒಂದೇ ರೀತಿಯಾಗಿರದೆ ಬೇರೆ ಬೇರೆಯಾಗಿದೆ, ಭಾಸನ ಸ್ವಪ್ನವಾಸವದತ್ತವೇ ಬೇರೆ, ಈ ಸ್ವಪ್ನನಾಟಕವೇ ಬೇರೆ; ಎಂದು ಮುಂತಾಗಿ ಆಕ್ಷೇಪಿಸಿ ಕೆಲಕೆಲವು ವಾಕ್ಯಸಾದೃಶ್ಯಗಳನ್ನು ಆಧಾರವಾಗಿಟ್ಟುಕೊಂಡು ಇವು ಆಶ್ಚರ್ಯ ಚೂಡಾಮಣಿಯ ಮಾದರಿಯಲ್ಲಿ ಬರೆದ ಈಚಿನ ಗ್ರಂಥ ಗಳೆಂದು ತೀರ್ಮಾನಿಸುತ್ತಾರೆ

ಭಾಸಪಕ್ಷದವರು ಈ ಆಕ್ಷೇಪಣೆಗಳಿಗೆ ಸಮಾಧಾನಗಳನ್ನು ಹೇಳಿ ತಮ್ಮ ಅಭಿಪ್ರಾಯವನ್ನೇ ಸಮರ್ಥಿಸುತ್ತಾರೆ ಈ ಬಗೆಯ ಆಕ್ಷೇಪಣೆ ಸಮಾಧಾನಗಳನ್ನು ವಿವರಿಸುವುದು ಇಲ್ಲಿ ಪ್ರಕೃತವಲ್ಲ. ಇದೇ ಸರಿ ಯೆಂದು ವಿವಾದಕ್ಕೆ ಆಸ್ಪದವಿಲ್ಲದಂತೆ ನಿರ್ಧರಿಸುವುದು ಸದ್ಯ ಸ್ಥಿತಿಯ ಲ್ಲಂತೂ ಸಾಧ್ಯವಲ್ಲ. ಆದರೂ ಈ ನಾಟಕಗಳನ್ನು ಮತ್ತೆ ಮತ್ತೆ ಓದುತ್ತ ಬಂದರೆ ಇವನ್ನು ಸಂಸ್ಕೃತ ಭಾಷೆ ಜನರಲ್ಲಿ ವಿಶೇಷವಾಗಿ

ಪ್ರಚಾರವಾಗಿದ್ದ ಕಾಲದಲ್ಲಿ ನಾಟಕ ರಚನೆಯಲ್ಲಿ ಚೆನ್ನಾಗಿ ನುರಿತ ಸಮರ್ಥ ಕವಿಯೊಬ್ಬನು ರಚಿಸಿರಬೇಕೆನ್ನಿಸುತ್ತದೆ. ಈ ಭಾವನೆ ಮನಸ್ಸಿನಲ್ಲಿ ನೆಲಸಿದ ಬಳಿಕ ರಾಜಶೇಖರಾದಿಗಳು ಭಾಸನ ಸ್ವಪ್ನವಾಸವದತ್ತದ ವಿಷಯದಲ್ಲಿ ಹೇಳಿರುವ ಅಭಿಪ್ರಾಯಗಳನ್ನು ನೆನಪಿನಲ್ಲಿಟ್ಟುಕೊಂಡು ಈ ಸ್ವಪ್ನವಾಸವದತ್ತವನ್ನು ಪರೀಕ್ಷಿಸಿದರೆ ಅದೇ ಇದಾಗಿರಬಹುದೆಂದು ಹೇಳಲು ಅಡ್ಡಿಯೇನೂ ತೋರುವುದಿಲ್ಲ. ಈ ೧೩ ನಾಟಕಗಳೂ ಭಾಸನವಲ್ಲವೆಂದು ನಿರಾಕರಿಸುವವರು ಕೂಡ ಸ್ವಪ್ನವಾಸವದತ್ತದಲ್ಲಿ ಬಹುಪಾಲು ಭಾಸನ ರಚನೆಯಿರಬಹುದೆಂದೂ, ಈಗ ನಮಗೆ ಸಿಕ್ಕಿರುವುದು ಆ ನಾಟಕದ ಮೂಲರೂಪವಾಗಿರದೆ ನಟರು ರಂಗಭೂಮಿಯ ಸೌಕರ್ಯಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡ ಮೂಲ ನಾಟಕದ ಸಂಗ್ರಹವಾಗಿರಬೇಕೆಂದೂ ಹೇಳುತ್ತಾರೆ. ಸ್ವಪ್ನವಾಸವದತ್ತಕ್ಕೆ ಭಾಸಕವಿಯು ಕರ್ತೃವೆಂದು ನಿಶ್ಚಯವಾದರೆ ಆಂತರ ಪ್ರಮಾಣಗಳ ಆಧಾರದಿಂದ ಉಳಿದ ನಾಟಕಗಳಿಗೂ ಅವನೇ ಕರ್ತೃವೆಂದು ಒಪ್ಪಲೇ ಬೇಕಾಗುತ್ತದೆ. ಆದ್ದರಿಂದ ಭಾಸನ ಹೆಸರಿನಲ್ಲಿ ಪ್ರಕಟವಾಗಿರುವ ಈ ೧೩ ನಾಟಕಗಳೂ ಬೇರೆಯವರು ರಚಿಸಿದವೆಂಬುದಕ್ಕೆ ಇನ್ನೂ ಬಲವಾದ ಕಾರಣಗಳು ದೊರಕುವವರೆಗೂ ಅವು ಭಾಸನ ನಾಟಕಗಳೆಂದು ಹೇಳುವುದರಲ್ಲಿ ಬಾಧಕವೇನೂ ತೋರುವುದಿಲ್ಲ.

ಭಾಸನು ಯಾವ ಕಾಲದಲ್ಲಿ ಬಾಳಿದನೆಂಬ ವಿಚಾರದಲ್ಲಿಯೂ ಪಂಡಿತರಲ್ಲಿ ವಿಶೇಷ ಭಿನ್ನಾಭಿಪ್ರಾಯಗಳಿವೆ. ಶ್ರೀ. ಟಿ. ಗಣಪತಿ ಶಾಸ್ತ್ರಿಗಳು ಭಾಸನು ಕ್ರಿ.ಪೂ. ೫ನೆಯ ಶತಮಾನದಷ್ಟು ಹಿಂದಿನವನೆನ್ನುತ್ತಾರೆ. ಅವರು ಪ್ರಕಟಿಸಿದ ೧೩ ನಾಟಕಗಳೂ ಭಾಸನವೆಂದು ಒಪ್ಪುವ ವಿದ್ವಾಂಸರು ಕೂಡ ಕಾಲದ ವಿಚಾರದಲ್ಲಿ ಅವರ ಮಾತನ್ನು ಅಂಗೀಕರಿಸುವುದಿಲ್ಲ, ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳುತ್ತಾರೆ. ಯಾರು ಹೇಗೆ ಹೇಳಿದರೂ ಭಾಸನು ಕಾಳಿದಾಸನಿಗಿಂತಲೂ ಪ್ರಾಚೀನನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಎಷ್ಟು ವರ್ಷ ಹಿಂದಿನವನೆಂದು ಹೇಳುವುದು ಕಷ್ಟ. ಕಾಳಿದಾಸನು ಸುಮಾರು ಕ್ರಿ.ಶ. ೪೦೦ರಲ್ಲಿದ್ದನೆಂದು ನಿರ್ಧರಿಸಿರುವುದರಿಂದ, ಭಾಸನು ಅವನಿಗಿಂತ ಒಂದೆರಡು

ಶತಮಾನಗಳು ಹಿಂದೆ ಇದ್ದಿರಬಹುದು. ಅವನ ಕಾಲವು ಕ್ರಿ.ಶ. ೩ನೆಯ ಶತಮಾನವೆಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು.

ಭಾಸನ ನಾಟಕಗಳಲ್ಲಿ ಪ್ರತಿಮಾ ನಾಟಕ, ಅಭಿಷೇಕ ನಾಟಕ—ಇವೆರಡೂ ರಾಮಾಯಣದ ಕಥೆಗೆ ಸಂಬಂಧಪಟ್ಟಿವೆ. ಪಂಚರಾತ್ರ, ಮಧ್ಯಮ ವ್ಯಾಯೋಗ, ದೂತವಾಕ್ಯ, ದೂತ ಘಟೋತ್ಕಚ, ಕರ್ಣ ಭಾರ, ಊರುಭಂಗ—ಈ ಆರು ನಾಟಕಗಳು ಮಹಾಭಾರತಕ್ಕೆ ಸಂಬಂಧ ಪಟ್ಟಿವೆ. ಬಾಲಚರಿತವು ಭಾಗವತದ ಕೃಷ್ಣಲೀಲೆಗೆ ಸೇರಿದ್ದು. ಪ್ರತಿಜ್ಞಾ ಯೌಗಂಧರಾಯಣ, ಸ್ವಪ್ನವಾಸವದತ್ತ ನಾಟಕಗಳು ಬೃಹತ್ಕಥೆಯ ಉದಯನನಿಗೆ ಸಂಬಂಧಿಸಿದವು; ಅವಿಮಾರಕ, ದರಿದ್ರ ಚಾರುದತ್ತ ಎಂಬ ಉಳಿದೆರಡು ಎಲ್ಲಿಂದ ತೆಗೆದುಕೊಂಡ ಕಥೆಗಳೋ ಗೊತ್ತಿಲ್ಲ. ಅವಕ್ಕೂ ಬೃಹತ್ಕಥೆಯೇ ಆಧಾರವಾಗಿದ್ದರೂ ಇರಬಹುದು.

ಭಾರತಕ್ಕೆ ಸಂಬಂಧಿಸಿದ ನಾಟಕಗಳಲ್ಲಿ ಪಂಚರಾತ್ರವೊಂದು ಹೊರತು ಉಳಿದ ಐದೂ ಏಕಾಂಕ ನಾಟಕಗಳು. ಈ ಐದನ್ನು ಬಿಟ್ಟರೆ ಇವನ ಉಳಿದ ಯಾವ ನಾಟಕವೂ ಒಂದು ಅಂಕದಲ್ಲಿಯೇ ಮುಗಿಯುವು ದಿಲ್ಲ. ಪಂಚರಾತ್ರದಲ್ಲಿ ಭಾಸ ಕವಿ ಉತ್ತರ ಗೋಗ್ರಹಣದ ಕಥೆಯನ್ನು ಚಮತ್ಕಾರವಾಗಿ ಬದಲಾಯಿಸಿಕೊಂಡು ಮಹಾಭಾರತ ಯುದ್ಧ ನಡೆಯು ವುದಕ್ಕೇ ಅವಕಾಶವಿಲ್ಲದಂತೆ ಅಪೂರ್ವ ಸನ್ನಿವೇಶಗಳನ್ನು ಕಲ್ಪಿಸಿದ್ದಾನೆ. ಆದರೆ ಯುದ್ಧ ನಡೆಯಿತೆಂಬುದು ಸಾತ್ತ್ವಿಕನಾದ ಭಾಸನಿಗೂ ತಿಳಿದೇ ಇದೆಯಷ್ಟೆ. ಆ ಭಾಗವನ್ನೂ ತನ್ನ ರೂಪಕಗಳಲ್ಲಿ ತೋರಿಸಿದ್ದಾನೆ. ಅವೇ ಈ ಏಕಾಂಕ ನಾಟಕಗಳು.

ಮಧ್ಯಮ ವ್ಯಾಯೋಗದ ಕಥೆ ಪೂರ್ತಿಯಾಗಿ ಕವಿಕಲ್ಪನೆಗೆ ಸೇರಿದ್ದು: ಪಂಚರಾತ್ರದ ಕಾಲಕ್ಕಿಂತ ಹಿಂದೆ ಪಾಂಡವರು ಅರಣ್ಯದಲ್ಲಿದ್ದಾಗ ನಡೆದ ಒಂದು ಸಂಗತಿ. ಇದರಲ್ಲಿ ಆದಿಪರ್ವದ ಕಥೆಯೂ ಸ್ವಲ್ಪ ಜ್ಞಾಪಕವಾಗುತ್ತದೆ. ತಾಯಿಯ ಉಪವಾಸಾಂತ್ಯದ ಪಾರಣೆಗೋಸ್ಕರ ಘಟೋತ್ಕಚನು ಹಿಡಿದುಕೊಂಡ ಒಬ್ಬ ಬ್ರಾಹ್ಮಣವಟುವನ್ನು ಕಾಪಾಡು ವುದಕ್ಕಾಗಿ ಭೀಮನು ಘಟೋತ್ಕಚನೊಡನೆ ಯುದ್ಧಮಾಡಿ ಮಗನ ಪರಾಕ್ರಮವನ್ನು ಕಂಡು ಸಂತೋಷಪಡುತ್ತಾನೆ. ಒಪ್ಪಂದಕ್ಕೆ ಕಟ್ಟು

ಬಿದ್ದು ಅವನ ಹಿಂದೆ ಹೋದ ಭೀಮನನ್ನು ಹಿಡಿಂಬೆಯು ಗುರುತಿಸಿ ಆದರಿಸುತ್ತಾಳೆ. ಬ್ರಾಹ್ಮಣನು ಭೀಮ ಘಟೋತ್ಕಚರನ್ನು ಹರಸುತ್ತ ಪ್ರಯಾಣಮಾಡುತ್ತಾನೆ. ಈ ನಾಟಕದಲ್ಲಿ ಸ್ವಜನ ರಕ್ಷಣೆಗಾಗಿ ನಾನು ತಾನೆಂದು ಸಾವಿಗೆ ಮುಂದೆ ನುಗ್ಗುವ ಬ್ರಾಹ್ಮಣ ಕುಟುಂಬದವರ ಸ್ವಜನ ವಾತ್ಸಲ್ಯವೂ ಇವನು ಭೀಮನೆಂದು ಅರಿಯದೆ ಅವನೊಡನೆ ಯುದ್ಧ ಮಾಡುವ ಘಟೋತ್ಕಚನ ಬಾಲವೀರ್ಯವೂ ಅವರಿಬ್ಬರನ್ನೂ ಹಾಗೆ ಸಂಧಿಸುವಂತೆ ಕಲ್ಪಿಸಿರುವ ಸನ್ನಿವೇಶದ ಸೊಗಸೂ ಅನನ್ಯಾದೃಶವಾಗಿದೆ

ಶ್ರೀಕೃಷ್ಣನು ಪಾಂಡವರ ಕಡೆಯ ರಾಯಭಾರಿಯಾಗಿ ಕೌರವ ಸಭೆಗೆ ಹೋಗಿಬಂದ ಕೃಷ್ಣಸಂಧಾನದ ಕಥೆ ದೂತವಾಕ್ಯದಲ್ಲಿ ಉಕ್ತವಾಗಿದೆ ಮಹಾಭಾರತದ ದುರ್ಯೋಧನನಂತೆ ದೂತವಾಕ್ಯದ ದುರ್ಯೋಧನನು ಕೃಷ್ಣನಿಗೆ ಉಚಿತ ರೀತಿಯಲ್ಲಿ ಸತ್ಕಾರ ಮಾಡುವುದಿಲ್ಲ. ಅವನು ಸಭೆಗೆ ಬಂದಾಗ ಗರ್ವದಿಂದಿದ್ದು ಸಿಂಹಾಸನದಿಂದ ಕೆಳಗೆ ಬಿದ್ದು ಅವಮಾನ ಹೊಂದುತ್ತಾನೆ ಈ ಕಥೆ ಸಾಹಿತ್ಯದಲ್ಲಿ ಮೊಟ್ಟಮೊದಲನೆಯ ಸಲ ಕಣ್ಣಿಗೆ ಬೀಳುವುದು ಈ ನಾಟಕದಲ್ಲಿಯೇ. ಸುದರ್ಶನ ಮೊದಲಾದ ಭಗವಂತನ ಆಯುಧಗಳೂ ರಂಗಭೂಮಿಗೆ ಬಂದು ಮಾತಾಡುವುದು ಇಲ್ಲಿನ ವಿಶೇಷ ವಿಷಯ ಬಗೆ ಬಗೆಯ ವೇಷಗಳನ್ನು ತಂದು ಸಭಿಕರಿಗೆ ರಂಜನೆಯನ್ನುಂಟುಮಾಡುವುದಕ್ಕೆ ಇಲ್ಲಿ ಭಾಸನು ಹೆಚ್ಚು ಗಮನಕೊಟ್ಟಂತೆ ಕಾಣುತ್ತದೆ ದ್ರೌಪದಿಯ ಅವಮಾನಕ್ಕೂ ಆ ಮೂಲಕ ಮಹಾಭಾರತ ಯುದ್ಧಕ್ಕೂ ಮೂಲ ಕಾರಣವಾದ ದ್ಯೂತ ವೃತ್ತಾಂತವನ್ನು ಚಿತ್ರಪಟದ ರೂಪದಲ್ಲಿ ಬಹು ಸೂಕ್ಷ್ಮವಾಗಿ ಸೂಚಿಸಿದ್ದಾನೆ.

ಅಭಿಮನ್ಯು ವಧೆಯಾದಮೇಲೆ, ಸೈಂಧವ ವಧೆಗೆ ಮೊದಲು ಘಟೋತ್ಕಚನು ಶ್ರೀಕೃಷ್ಣನ ಸಂದೇಶವನ್ನು ಧೃತರಾಷ್ಟ್ರನಿಗೆ ತೆಗೆದುಕೊಂಡು ಹೋಗಿ ತಲುಪಿಸುತ್ತಾನೆ. ಇದೇ ದೂತ ಘಟೋತ್ಕಚದ ಕಥೆ. ಈ ಕಥೆಯೂ ಮೂಲಭಾರತದಲ್ಲಿಲ್ಲ. ಅಭಿಮನ್ಯು ವಧೆಯಿಂದ ಪಾಂಡವರಿಗಾಗಿರುವ ನಷ್ಟ, ಅದರಿಂದ ಕೆರಳಿರುವ ಅರ್ಜುನನ

ಕ್ರೋಧ, ಮುಂದೆ ಒದಗುವ ಯುದ್ಧದ ಭಯಂಕರ ಪರಿಣಾಮ—
ಇವುಗಳನ್ನು ಮನಸ್ಸಿಗೆ ನಾಟುವಂತೆ ಈ ನಾಟಕದಲ್ಲಿ ಚಿತ್ರಿಸಿದ್ದಾನೆ

ಅಭಿಮನ್ಯು ಮಡಿದ ಬಳಿಕ ಯುದ್ಧದ ಸ್ವಾರಸ್ಯವೆಲ್ಲವೂ ಕರ್ಣನಲ್ಲಿ ಕೇಂದ್ರೀಕೃತವಾಗುತ್ತದೆ ಯುದ್ಧಕಾಲದಲ್ಲಿ ಕರ್ಣನ ಸ್ಥಿತಿ ಹೇಗಿದ್ದಿತೆಂಬುದನ್ನು ಭಾಸಕವಿ ಕರ್ಣಭಾರದಲ್ಲಿ ಚೆನ್ನಾಗಿ ಚಿತ್ರಿಸಿದ್ದಾನೆ. ಇಂದ್ರನು ಬ್ರಾಹ್ಮಣವೇಷದಿಂದ ಬಂದು ಅವನ ಕವಚಕುಂಡಲಗಳನ್ನು ತೆಗೆದುಕೊಂಡು ಹೋದ ವೃತ್ತಾಂತವೇ ಇದರ ವಸ್ತು ಕರ್ಣಾರ್ಜುನರ ಯುದ್ಧವನ್ನು ವರ್ಣಿಸದಿದ್ದರೂ ಅದರ ಪರಿಣಾಮವು ಹೀಗೇ ಆಗುವುದೆಂಬುದನ್ನು ಊಹೆಯಿಂದಲೇ ತಿಳಿಯುವಂತೆ ಮಾಡಿದ್ದಾನೆ.

ಮುಂದಿನದು ಊರುಭಂಗ ಇದರಲ್ಲಿ ಭೀಮ ದುರ್ಯೋಧನರಿಗೆ ನಡೆದ ಗದಾಯುದ್ಧವು ವರ್ಣಿತವಾಗಿದೆ ದೂತವಾಕ್ಯದಲ್ಲಿ ಕಂಡ ಗರ್ವಿ ದುರ್ಯೋಧನನಿಗೂ ಇಲ್ಲಿನ ಪಶ್ಚಾತ್ತಾಪಯುಕ್ತನಾದ ದುರ್ಯೋಧನನಿಗೂ ಬಹಳ ಅಂತರವಿದೆ ಪಾಂಡವರಿಗೆ ಒಂದು ಹುಲ್ಲುಕಡ್ಡಿಯನ್ನೂ ಕೊಡಲೊಲ್ಲೆನೆಂದು ಅವರನ್ನು ಅಲ್ಲಗಳೆದ ಅದೇ ದುರ್ಯೋಧನನೇ ಅವರು ಬದುಕಿರಲೆಂದು ಹಾರೈಸಿ ಅಶ್ವತ್ಥಾಮನ ಕ್ರೋಧವನ್ನು ಶಾಂತಗೊಳಿಸಲು ಯತ್ನಿಸುತ್ತಾನೆ ತಾನು ಮಾಡಿದ ತಪ್ಪುಗಳನ್ನು ನೆನೆದುಕೊಂಡು ತನಗೆ ಆ ಗತಿ ಬಂದದ್ದಕ್ಕೆ ಅಸಮಾಧಾನಪಡದೆ, ಪಾಂಡವರಿಗೂ ಶ್ರೇಯಸ್ಸನ್ನು ಕೋರುತ್ತ ಸ್ವರ್ಗಕ್ಕೆ ನಡೆಯುತ್ತಾನೆ ಅವನಲ್ಲಿ ಈ ರೀತಿಯ ಮಾರ್ಪಾಟು ಹುಟ್ಟಿರುವುದು ಈ ನಾಟಕದಲ್ಲಿ ಸಹಜವಲ್ಲವೆಂದು ತೋರುವುದಿಲ್ಲ. ಧರ್ಮರಾಜನಿಗೆ ಜಯವು ಕೈಸೇರುವುದರ ಜೊತೆಯಲ್ಲಿಯೇ ದುರ್ಯೋಧನನಿಗೂ ಹೃದಯಪರಿವರ್ತನೆಯನ್ನುಂಟುಮಾಡಿ ಭಾರತ ಕಥೆಯನ್ನು ಭಾಸನು ಬಹು ಮನೋಹರವಾಗಿ ಮುಗಿಸಿದ್ದಾನೆ.

ರಂಗದಲ್ಲಿ ಮರಣವನ್ನು ತೋರಿಸಬಾರದೆಂಬುದು ಸಂಸ್ಕೃತ ನಾಟಕಗಳ ಸಾಮಾನ್ಯ ನಿಯಮ. ಊರುಭಂಗದಲ್ಲಿ ನಾಯಕನಾದ ದುರ್ಯೋಧನನು ರಂಗದ ಮೇಲೆಯೇ ಮಡಿಯುವನಾದ್ದರಿಂದ ಈ ನಿಯಮಕ್ಕೆ ಭಂಗವುಂಟಾಗಿದೆ ಭಾಸನ ಕಾಲದಲ್ಲಿ ಈ ನಿಯಮವಿರಲಿಲ್ಲವೋ ಏನೋ!

ಮೇಲೆ ಹೇಳಿದ ಐದು ನಾಟಕಗಳೂ ಒಂದೇ ಒಂದು ದೊಡ್ಡ ನಾಟಕದ ಭಾಗಗಳಂತಿವೆಯೆಂದರೂ ಒಪ್ಪುತ್ತದೆ. ದೂತವಾಕ್ಯದಲ್ಲಿ ಪ್ರಾರಂಭವಾದ ಯುದ್ಧೋದ್ಯೋಗವು ಊರುಭಂಗದಲ್ಲಿ ಪರ್ಯವಸಾನ ಹೊಂದುತ್ತದೆ. ನಡುವಣ ದೂತ ಘಟೋತ್ಕಚ ಕರ್ಣಭಾರಗಳು ಈ ಯುದ್ಧದಲ್ಲಿ ಬಹು ಮುಖ್ಯವಾದ ಎರಡು ಘಟ್ಟಗಳನ್ನು ತೆರೆದು ತೋರಿಸುತ್ತವೆ. ಮಧ್ಯಮ ವ್ಯಾಯೋಗ ಮಾತ್ರ ಯುದ್ಧದಲ್ಲಿ ಅಷ್ಟು ನೇರವಾಗಿ ಸಂಬಂಧಿಸುವುದಿಲ್ಲ. ಆದರೆ ಕೊನೆಗೆ ಜಯಶಾಲಿಗಳಾಗುವ ಪಾಂಡವರನ್ನು ಪರಿಚಯಮಾಡಿಕೊಟ್ಟು, ಮುಂದೆ ಬರುವ ಯುದ್ಧಕ್ಕೆ ಪೀಠಿಕಾ ರೂಪವಾಗಿ ಒಂದೆರಡು ಸೂಚನೆಗಳನ್ನು ಕೊಟ್ಟು ಸಭಿಕರ ಮನಸ್ಸನ್ನು ಒಂದು ಹದಕ್ಕೆ ತರುತ್ತದೆ. ಈ ಐದು ನಾಟಕಗಳನ್ನೂ ಒಟ್ಟಾಗಿ ಓದಿದರೆ ಪಂಚರಾತ್ರವನ್ನು ನೋಡದಿದ್ದರೂ ಭಾರತ ಕಥೆಯೆಲ್ಲವೂ ತಿಳಿದು ಉತ್ತಮವಾದ ರಸಾನುಭವವುಂಟಾಗುತ್ತದೆ.

ಮಹಾಭಾರತವು ಆಬಾಲವೃದ್ಧರಿಗೂ ಚೆನ್ನಾಗಿ ಗೊತ್ತಿರುವುದರಿಂದ ಕಥೆ ಹೇಳುವುದು ಭಾಸನ ಮುಖ್ಯೋದ್ದೇಶವಲ್ಲ. ಆ ಮಹಾಕಥೆಯಲ್ಲಿ ರಸವತ್ತಾದ ಭಾಗಗಳನ್ನು ಆರಿಸಿಕೊಂಡು ನೋಡುವವರಿಗೆ ಹೃದಯಂಗಮವಾಗುವ ಹಾಗೆ ಅಭಿನಯಕ್ಕೆ ಹೊಂದುವಂತೆ ಕೇವಲ ಸಂಕ್ಷೇಪವಾಗಿ ನಾಟಕಗಳನ್ನು ರಚಿಸಿ ಮುಖ್ಯ ವ್ಯಕ್ತಿಗಳ ಅಂತರಂಗವನ್ನು ಬಿಡಿಸಿ ತೋರಿಸುವುದೇ ಅವನ ಧ್ಯೇಯವೆಂದು ತೋರುತ್ತದೆ. ಈ ಧ್ಯೇಯವನ್ನು ಭಾಸನ ನಾಟಕಗಳಷ್ಟು ಸಮರ್ಪಕವಾಗಿ ಪೂರ್ಣ ಮಾಡುವ ನಾಟಕಗಳು ಬಹು ವಿರಳ.

ಈಗ ನಾಲ್ಕು ವರ್ಷಗಳ ಹಿಂದೆ ಪರೀಕ್ಷೆಯ ಆವಶ್ಯಕತೆಗಾಗಿ ಈ ನಾಟಕಗಳನ್ನು ಓದಿದಾಗ ಇವನ್ನು ಕನ್ನಡಿಸಬೇಕೆಂದು ಆಸೆಯುಂಟಾಯಿತು. 'ಗದಾಯುದ್ಧ'ವನ್ನು ಕುರಿತ 'ಊರುಭಂಗ'ವನ್ನು ಆಗಲೇ ಕನ್ನಡಿಸಿದ್ದೆನು. ಉಳಿದ ನಾಲ್ಕು ನಾಟಕಗಳನ್ನೂ ಈ ವರ್ಷ ಬರೆದೆನು. ಇವಕ್ಕೂ 'ಊರುಭಂಗ'ಕ್ಕೂ ಭಾಷಾ ಶೈಲಿ ಮತ್ತು ಭಾಷಾಂತರ ಕ್ರಮಗಳಲ್ಲಿ ಹೆಚ್ಚು ಕಡಮೆಗಳು ಕಂಡುಬಂದರೆ ಅದಕ್ಕೆ ಈ ಕಾಲ ವ್ಯತ್ಯಾಸವೇ ಮುಖ್ಯ ಕಾರಣ.

ಈ ನಾಟಕಗಳ ಭಾಷೆ ಸರಳವಾಗಿರುವುದಾದರೂ ಕೆಲವು ಕಡೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಸಂದೇಹಗಳನ್ನು ಪರಿಹರಿಸುವ ವ್ಯಾಖ್ಯಾನಗಳೂ ಇಲ್ಲ. ಆದ್ದರಿಂದ ಸಂದೇಹವಾದ ಕಡೆಗಳಲ್ಲಿ ನನ್ನ ಬುದ್ಧಿಗೆ ಹೊಳೆದಂತೆ ಭಾಷಾಂತರ ಮಾಡಿ ಮೂಲ ಪಾಠವನ್ನೂ ಕೊಟ್ಟಿದ್ದೇನೆ.

ಭಾಷಾಂತರ ಮಾಡುವಾಗ ಇರುವುದನ್ನು ಬಿಡದೆ, ಇಲ್ಲದ್ದನ್ನು ಸೇರಿಸದೆ ಮೂಲಗ್ರಂಥ ಹೇಗಿದೆಯೋ ಹಾಗೆಯೇ ಪ್ರತಿಬಿಂಬಿಸಬೇಕೆಂಬುದು ನನ್ನ ಗುರಿ. ಈ ಗುರಿಯನ್ನು ಸಾಧಿಸಿಕೊಳ್ಳುವುದಕ್ಕೆ ಆದಷ್ಟು ಪ್ರಯತ್ನಪಟ್ಟಿದೇನೆ. ಎಷ್ಟುಮಟ್ಟಿಗೆ ಸಫಲವಾಗಿದೆಯೋ ತಿಳಿಯದು. ಮೂಲಗ್ರಂಥದಲ್ಲಿ ಪದ್ಯದ ಭಾಷೆಗೂ ಗದ್ಯದ ಭಾಷೆಗೂ ವ್ಯತ್ಯಾಸವೇ ತೋರುವುದಿಲ್ಲ. ಜನಸಾಮಾನ್ಯಕ್ಕೆ ಸುಲಭವಾಗಿ ಅರ್ಥವಾಗುವ ಸರಳವಾದ ಪುಟ್ಟ ಪುಟ್ಟ ಮಾತುಗಳಿರುವುದರಿಂದ ಅವು ಅಭಿನಯಕ್ಕೆ ಚೆನ್ನಾಗಿ ಹೊಂದುವಂತಿವೆ. ಈಗ ಎಲ್ಲ ಜನರಿಗೂ ತಿಳಿಯುವಂತಾಗಬೇಕಾದರೆ ಹೊಸಗನ್ನಡದಲ್ಲಿಯೇ ಬರೆಯಬೇಕು ಹೊಸಗನ್ನಡದಲ್ಲಿ ಕಂದ ವೃತ್ತಗಳನ್ನು ಅವುಗಳ ಬಿಗಿ ಕೆಡದಂತೆ ಬರೆಯಲು ಸಾಧ್ಯವಿಲ್ಲ. ಅಲ್ಲದೆ ಕೆಲವುವೇಳೆ ಪಾದಪೂರಣೆಗಾಗಿ ಪದಗಳನ್ನು ತುಂಬಬೇಕಾಗುತ್ತದೆ. ಈ ಕೊರತೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ಇಷ್ಟೇ ಪಾದಗಳಿರಬೇಕೆಂಬ ನಿರ್ಬಂಧವಿಲ್ಲದ ಸರಳ ರಗಳೆಯನ್ನು ಪದ್ಯಗಳಿಗೆ ಉಪಯೋಗಿಸಿಕೊಂಡಿದ್ದೇನೆ. ಪರೀಕ್ಷಾರ್ಥವಾಗಿ ಮಾಡಿರುವ ಈ ಪ್ರಯತ್ನವನ್ನು ಸಾಹಿತ್ಯಾಭಿಮಾನಿಗಳು ಸಹಾನುಭೂತಿಯಿಂದ ವಿಮರ್ಶಿಸಿ ಗುಣದೋಷಗಳನ್ನು ತೋರಿಸಿಕೊಡಬೇಕೆಂದು ನಮ್ರನಾಗಿ ಪ್ರಾರ್ಥಿಸುತ್ತೇನೆ.

ನನ್ನ ಪೂಜ್ಯಗುರುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ , ಬಿ.ಎಲ್. ಮತ್ತು ಶ್ರೀಮಾನ್ ಎ ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರ ಪ್ರೋತ್ಸಾಹದಿಂದಲೂ, ನನ್ನ ಮಿತ್ರರ ಸಹಾನುಭೂತಿಯ ಬೆಂಬಲದಿಂದಲೂ ಈ ಕೆಲಸಕ್ಕೆ ಕೈಹಾಕಿ ಪೂರ್ತಿಮಾಡಲು ಸಾಧ್ಯವಾಯಿತು. ಅವರೆಲ್ಲರಿಗೂ, ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ಸಹಾಯಮಾಡಿದ ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಅಧಿಕಾರಿಗಳಿಗೂ ನನ್ನ ಅನಂತ ವಂದನೆಗಳು.

ಅಭ್ಯಾಸಕ್ಕೆ ಸಹಾಯಕವಾದ

## ಕೆಲವು ಕನ್ನಡ ಗ್ರಂಥಗಳು

ಸಂಸ್ಕೃತ ನಾಟಕ: ಎ ಆರ್ ಕೃಷ್ಣಶಾಸ್ತ್ರೀ, ಎಂ ಎ.
ಭಾಸ ಕವಿ: ,,
ಭಾಸ ಮಹಾಕವಿ: ಸಿ ಕೆ ವೆಂಕಟರಾಮಯ್ಯ, ಎಂ.ಎ.,ಎಲ್ ಎಲ್.ಬಿ.
ಭಾಸ: ಎಚ್. ಎಲ್ ಹರಿಯಪ್ಪ, ಎಂ ಎ.

**ಕನ್ನಡ ಭಾಷಾಂತರಗಳು**

ಕರ್ಣಾಟಕ ಸ್ವಪ್ನವಾಸವದತ್ತ ನಾಟಕಂ: ದೇವಶಿಖಾಮಣಿ ಅಳಸಿಂಗರಾಚಾರ್ಯ
ಕರ್ನಾಟಕ ಸ್ವಪ್ನವಾಸವದತ್ತಂ: ಭೀಮಾಜಿ ಜೀವಾಜಿ ಹುಲಿಕವಿ
ಕರ್ಣಾಟ ಪ್ರತಿಮಾನಾಟಕಂ: ಮೈಸೂರು ಸೀತಾರಾಮಶಾಸ್ತ್ರಿ
ಅಭಿಷೇಕ ನಾಟಕ: ಬಿ ನಂಜುಂಡಸ್ವಾಮಿ
ಪಂಚರಾತ್ರರೂಪಕಂ: ದೇವಶಿಖಾಮಣಿ ಅಳಸಿಂಗರಾಚಾರ್ಯ
ಕನ್ನಡ ಪಂಚರಾತ್ರ: ಡಾ॥ ಎನ್. ಎಸ್ ನಾರಾಯಣಶಾಸ್ತ್ರಿ, ಎಂ.ಎ.
ಕರ್ಣಭಾರ - ದೂತವಾಕ್ಯ. ಪಾನ್ಯಂ ಸುಂದರಶಾಸ್ತ್ರಿ
ದೂತವಾಕ್ಯಂ: ಕಡಬದ ನಂಜುಂಡಶಾಸ್ತ್ರಿ
ದೂತವಾಕ್ಯಂ: ಕೆ. ಆರ್ ರಾಮಸ್ವಾಮಿ, ಎಂ.ಎ.
ಪ್ರತಿಜ್ಞಾಯೌಗಂಧರಾಯಣ. ಎಲ್ ಗುಂಡಪ್ಪ, ಎಂ ಎ.
ಭಾಸಕವಿಯ ಚಾರುದತ್ತ: ,,
ಕರ್ನಾಟಕ ಬಾಲಚರಿತ: ಎಚ್. ಶೇಷಯ್ಯಂಗಾರ್

## ವಿಷಯ ಸೂಚಿಕೆ

## ಪಾತ್ರಗಳು

ಸೂತ್ರಧಾರ
ಭೀಮಸೇನ
ಹಿಡಿಂಬೆ
ಘಟೋತ್ಕಚ
ವೃದ್ಧ—ಒಬ್ಬ ಬ್ರಾಹ್ಮಣ
ಬ್ರಾಹ್ಮಣಿ—ಅವನ ಹೆಂಡತಿ

| | |
|---|---|
| ಪ್ರಥಮ<br>ದ್ವಿತೀಯ<br>(ಮಧ್ಯಮ)<br>ತೃತೀಯ | } ಅವರ ಮಕ್ಕಳು |

---

# ಮಧ್ಯಮ ವ್ಯಾಯೋಗ

(ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

ಸೂತ್ರಧಾರ— ಕುವಲಯದ ದಳದಂತೆ ಬೆಳಗಿರುವ ಬಾಳಂತೆ
ನೀಲವರ್ಣವನಾಂತು, ಅಸುರ ವಧುಗಳ ಹೃದಯ
ಕಳಿವನೊದವಿಸಿ ಮೆರೆವ ಶ್ರೀಹರಿಯ ಪಾದ—
ತ್ರಿಭುವನವನಳೆವಂದು ಮೇಲೆತ್ತಿ ನಿಂದಿರಲು
ಗಗನ ಸಾಗರದೊಳಗೆ ವೈಡೂರ್ಯ ಸೇತುವೆನೆ
ರಂಜಿಸಿದ ಪಾದ— ಪಾಲಿಸಲಿ ನಿಮ್ಮನೊಲಿದು. ॥ ೧ ॥

ಆರ್ಯ ಮಹಾಶಯರಲ್ಲಿ ವಿಜ್ಞಾಪನೆ. ಓಹೋ, ನಾನು ವಿಜ್ಞಾಪಿಸು ವುದರಲ್ಲಿ ತೊಡಗಿರುವಾಗಲೇ ಗದ್ದಲವಾಗುವ ಹಾಗೆ ಕೇಳಿಸು ವುದಲ್ಲ! ಇರಲಿ, ನೋಡೋಣ.

(ತೆರೆಯಲ್ಲಿ)

ಭೋ ತಾತ, ಇವನು ಯಾರೋ ಕಾಣೆನಲ್ಲ!

ಸೂತ್ರಧಾರ— ಆಗಲಿ, ತಿಳಿಯಿತು.

ಭೋಯೆಂದು ನುಡಿಯುವನು, ಬ್ರಾಹ್ಮಣನೆ ಸರಿಯಿವನು,
ಸಂದೇಹವಿಲ್ಲ.
ಪಾಪಾತ್ಮನಾವನೋ ನಿಶ್ಶಂಕೆಯಿಂದಿವನ ಬೆದರಿಸುವನಲ್ಲ. ॥ ೨ ॥

(ತೆರೆಯಲ್ಲಿ)

ಭೋ ತಾತ, ಇವನು ಯಾರೋ ಕಾಣೆನಲ್ಲ!

ಸೂತ್ರಧಾರ— ಆಹಾ, ದೃಢವಾಗಿ ಗೊತ್ತಾಯಿತು. ಪಾಂಡವ ಮಧ್ಯಮನ ಮಗನಾಗಿ ಹಿಡಿಂಬೆಯೆಂಬ ಅರಣಿಯಲ್ಲಿ ಹುಟ್ಟಿದ ಈ ರಾಕ್ಷಸಾ ಗ್ನಿಯು ವೈರವನ್ನೇ ಕಂಡರಿಯದ ಬ್ರಾಹ್ಮಣರನ್ನು ಬೆದರಿಸು ತ್ತಿರುವನು. ಅಯ್ಯೋ, ಕಷ್ಟ ಕಷ್ಟ. ಪತ್ನೀ ಪುತ್ರರಿಂದ ಕೂಡಿದ ಬ್ರಾಹ್ಮಣನ ಗತಿ ಬಹು ಕಷ್ಟ. ಇಲ್ಲಿ ನೋಡಿದರೆ,

ರಕ್ಕಸನು ಬೆಂಬಿಡದೆ ಬರುತಿರಲು ಬಳಲಿರುವ
ತರುಣ ಸುತರೊಡಗೂಡಿ, ಸತಿವೆರಸಿದೀ ವೃದ್ಧ
ಭೂಸುರನು ಕಳವಳಕೆ ಸಿಲುಕಿದನು ; ಹುಲಿ ಹಿಂದೆ
ಬರುತಿರಲು ಹೆದರಿ ನಡುಗುವ ಕರುಗಳೊಡಗೂಡಿ
ಹಸುವ ಜೊತೆಗೊಂಡಿರುವ ಹಿರಿವೃಷಭದಂತೆ. ॥ ೩ ॥

(ಹೊರಡುತ್ತಾನೆ)

ಸ್ಥಾಪನೆ ಮುಗಿಯಿತು

---

(ಬಳಿಕ ಹೆಂಡತಿ ಮತ್ತು ಮೂವರು ಗಂಡುಮಕ್ಕಳೊಡನೆ ಕೇಶವದಾಸನೂ
( ಅವರ ಹಿಂದೆ ಘಟೋತ್ಕಚನೂ ಪ್ರವೇಶಿಸುತ್ತಾರೆ )

ವೃದ್ಧ— ಅಯ್ಯೋ, ಯಾರಿವನು !

ಅರುಣರವಿ ಕಿರಣವೆನೆ ಹರಡಿಹುದು ಕುರುಳೋಳಿ.
ಹುಬ್ಬು ಗಂಟಿಕ್ಕಿರಲು ದೊಡ್ಡ ಕೆಂಗಣ್ಣುಗಳು
ಥಳಥಳನೆ ಹೊಳೆಯುತಿವೆ ಕಂಠಸೂತ್ರವನಾಂತು,
ಮಿಂಚುತಿಹ ಕಾರ್ಮುಗಿಲ ಹೋಲುವನು ಯುಗನಿಧನ
ಕಾಲದಾ ಹರನ ಪ್ರತಿಮೆಯ ಹಾಗೆ ತೋರುತಿಹನು. ॥ ೪ ॥

ಪ್ರಥಮ-- ಭೋ ತಾತ, ಇವನು ಯಾರೋ ಕಾಣೆನಲ್ಲಾ !

ಗ್ರಹಯುಗಳದಂತೆಸೆವ ಕಣ್ಣುಗಳು, ಹೊಂಬಣ್ಣ
ದುರಿಗುರುಳು, ಬೆಳೆದುಬ್ಬಿ ಹರಡಿದೆದೆಯುಟ್ಟಿರುವ
ಪಟ್ಟೆಪೀತಾಂಬರವು, ಕತ್ತಲೆಯ ಮೊತ್ತವನು
ಕಟ್ಟಿಟ್ಟ ಮೈ ಬಣ್ಣ, ಮೇಲೆದ್ದ ಬೆಳ್ಳನೆಯ
ಕೋರೆಗಳು—ಇಂತಿವನು ಚಂದ್ರಲೇಖೆಯ ಮುಸುಕಿ
ಮರೆಮಾಡತೊಡಗಿರುವ ಹೊಸ ಮುಗಿಲಿನಂತೆಸೆವನು. ॥ ೫ ॥

ದ್ವಿತೀಯ— ಯಾರಪ್ಪಾ, ಇವನು !

ಗಜದಂತದಂತೆಸೆವ ಕೋರೆಗಳ, ಸೊಂಡಿಲಿಗೆ
ಸಮನೆನಿಪ ತೋಳುಗಳ, ನೇಗಿಲನು ಹೋಲುತಿಹ
ನಾಸಿಕವ, ತಳೆದಿಹನು. ನೀಲಮೇಘದ ವರ್ಣ

ದಿಂದ ಮೈ ರಂಜಿಪುದು. ಹೋಮಕುಂಡದೊಳಗ್ನಿ
ಯಾಹುತಿಯ ಕೊಂಡುರಿವ ರೀತಿಯಲಿ ಹೊಳೆಯುವನು.
ತ್ರಿಪುರ ಸಂಹಾರದಲಿ ಮೊರೆದೆದ್ದ ಶಂಕರನ
ರೋಷವೆಂಬಂತಿವನು ರೌದ್ರತೆಯ ತೋರುತಿಹನು. ॥ ೬ ॥

ತೃತೀಯ — ಭೋ ತಾತ, ನಮ್ಮನ್ನು ಪೀಡಿಸುತ್ತಿರುವ ಇವನು ಯಾರು?

ಗಿರಿಗಳಿಗೆ ವಜ್ರವೆನೆ, ಖಗಗಳಿಗೆ ಗಿಡಗನೆನೆ,
ಮೃಗಗಳಿಗೆ ಸಿಂಹವೆನೆ, ಮೈವೆತ್ತ ಮೃತ್ಯು ನಮಗೆ. ॥ ೭ ॥

ಬ್ರಾಹ್ಮಣಿ — ಆರ್ಯ, ನಮ್ಮನ್ನು ಸಂತಾಪಗೊಳಿಸುತ್ತಿರುವ ಇವನು ಯಾರು?

ಘಟೋತ್ಕಚ — ಅಯ್ಯಾ, ಬ್ರಾಹ್ಮಣ! ನಿಲ್ಲು, ನಿಲ್ಲು.

ಮಡದಿಯೊಡಗೂಡಿರುವ ಭುಜಗನನು ಗರುಡ ತಾ
ಬೆನ್ನಟ್ಟಬರುವಂದು ತುದಿರೆಕ್ಕೆಯಿಂದೊಗೆದ
ಗಾಳಿಯಲಿ ರೋಷಾಗ್ನಿ ಹೊಗೆ ಹೊಗೆದು ಹಬ್ಬಿದರು
ಗತಿಗಾಣದಾ ಭುಜಗ ವೇಗದಿಂದೋಡುವೊಲು
ನನ್ನ ಹೆದರಿಕೆಯಿಂದ ಧೈರ್ಯಸಾರವನೆಲ್ಲ
ಕಳೆದುಕೊಂಡಿಂತೇತಕೋಡುತಿಹೆ ಭೂಸುರನೆ?
ಭಯಗೊಂಡು ನಡುಗುತಿಹ ಸತಿಸುತರ ರಕ್ಷಿಸಲು
ಶಕ್ತಿಯಿಲ್ಲದೆ ನೀನದಿಂತೇತಕೋಡುತಿರುವೆ? ॥೮॥

ಅಯ್ಯಾ ಬ್ರಾಹ್ಮಣ, ಹೋಗಬೇಡ, ಹೋಗಬೇಡ.

ವೃದ್ಧ — ಬ್ರಾಹ್ಮಣೀ, ಹೆದರಬೇಡ. ಮಕ್ಕಳಿರಾ, ಹೆದರಬೇಡಿ. ಇವನು ವಿಮರ್ಶೆಮಾಡಿ ಮಾತಾಡುತ್ತಿದ್ದಾನೆ.

ಘಟೋತ್ಕಚ — ಅಯ್ಯೋ, ಕಷ್ಟ.

ಬಲ್ಲೆನೆಲ್ಲೆಡೆಗಳೊಳು ಮೇಣೆಲ್ಲ ಕಾಲದೊಳು
ಭೂಸುರೋತ್ತಮರೆಮಗೆ ಪೂಜ್ಯತಮರೆಂಬುದನು.
ಮಾತೆಯಾಣತಿಯಿಂದ ಶಂಕೆಯಿನಿತಿಲ್ಲದೆಯೆ
ನಾನೀಯಕಾರ್ಯವನೆ ಮಾಡುತಿಹೆನಿಂದು. ॥ ೯ ॥

ವೃದ್ಧ—ಬ್ರಾಹ್ಮಣೀ, "ಈ ವನದಲ್ಲಿ ರಾಕ್ಷಸರಿದ್ದಾರೆ; ಆದಕಾರಣ ಎಚ್ಚರಿಕೆಯಿಂದ ಪ್ರಯಾಣಮಾಡಿ" ಎಂದು ಪೂಜ್ಯರಾದ ಜಲಕ್ಲಿನ್ನ ಮುನಿಗಳು ಹೇಳಿದ್ದದ್ದು ನೆನಪಿದೆಯಲ್ಲವೆ! ಆ ಭಯವೇ ಈಗ ಪ್ರಾಪ್ತವಾಗಿದೆ.

ಬ್ರಾಹ್ಮಣಿ—ಇದೇನು, ಈಗ ಕ್ಷತ್ರಿಯರ ಹಾಗೆ ಧೀರರಾಗಿಬಿಟ್ಟಿರಲ್ಲ

ವೃದ್ಧ—ಮಂದಭಾಗ್ಯನಾದ ನಾನು ಏನು ಮಾಡಲಿ?

ಬ್ರಾಹ್ಮಣಿ—ಕೂಗಿಕೊಳ್ಳೋಣವೆ?

ಪ್ರಥಮ—ಅಮ್ಮಾ, ಯಾರನ್ನು ಕೂಗೋಣ?

ಇದು ಶೂನ್ಯವನವಿಲ್ಲಿ ಕತ್ತಲೆಯು ಚೆಲ್ಲುತಿಹ
ಬೆಟ್ಟಗಳು ಕೋಟೆಯೊಲು ದಿಕ್ಕು ದಾರಿಯನಡ್ಡ
ಗಟ್ಟಿಹವು. ಬಗೆ ಬಗೆಯ ಪಕ್ಷಿಗಳು, ಬಗೆ ಬಗೆಯ
ಮೃಗಗಡಣವೀಯಡವಿಯೊಡಲೊಳಗೆ ತುಂಬಿಹವು
ಇಂತಿದು ಮನಸ್ವಿಜನ ವಾಸಿಸಲು ತಕ್ಕುದಹುದು. ॥೧೦॥

ವೃದ್ಧ—ಬ್ರಾಹ್ಮಣೀ, ಹೆದರಬೇಡ, ಹೆದರಬೇಡ. ಮನಸ್ವಿಜನ ವಾಸಕ್ಕೆ ತಕ್ಕುದ್ದೆಂಬ ಮಾತನ್ನು ಕೇಳಿ ನನ್ನ ಹೆದರಿಕೆಯೆಲ್ಲ ನಾಶವಾದಂತಾಯಿತು. ಇಲ್ಲಿ, ಹತ್ತಿರದಲ್ಲಿಯೇ ಪಾಂಡವಾಶ್ರಮವಿರಬೇಕೆಂದು ತೋರುತ್ತದೆ. ಪಾಂಡವರಾದರೋ

ನಾಡೆ ಯುದ್ಧಪ್ರಿಯರು, ಶರಣಜನ ವತ್ಸಲರು,
ದೀನರಲಿ ಪಕ್ಷಪಾತವನಿಟ್ಟು ಪೊರೆಯುವರು,
ಸಾಹಸವ ಮೆರೆದವರು; ಭಯಕರಾಕೃತಿಯಾಂತು
ರೌದ್ರಕರ್ಮವನೆಸಗುವೀಪರಿಯ ದುಷ್ಕರನು
ತಾರತಮ್ಯವನರಿತು ಶಿಕ್ಷಿಸಲು ಶಕ್ತರಹರು. ॥೧೧॥

ಪ್ರಥಮ—ತಾತ, ಅಲ್ಲಿ ಈಗ ಪಾಂಡವರಿಲ್ಲವೆಂದು ಕಾಣುತ್ತದೆ.

---

* ಕಿಮಿದಾನೀಮಾರ್ಯೋ ಮಧ್ಯಸ್ಥವರ್ಣ ಇವ ದೃಶ್ಯತೇ.

ವೃದ್ಧ— ಪುತ್ರ, ನಿನಗೆ ಹೇಗೆ ಗೊತ್ತು?

ಪ್ರಥಮ— ಅವರ ಆಶ್ರಮದಿಂದ ಬಂದ ಒಬ್ಬಾನೊಬ್ಬ ಬ್ರಾಹ್ಮಣನು ಅವರು ಶತಕುಂಭವೆಂಬ ಯಜ್ಞವನ್ನು ನೋಡುವುದಕ್ಕಾಗಿ ಧೌಮ್ಯ ಮಹರ್ಷಿಗಳ ಆಶ್ರಮಕ್ಕೆ ಹೋದರೆಂದು ಹೇಳಿದನು.

ವೃದ್ಧ— ಅಯ್ಯೋ, ಕೆಟ್ಟೆವು!

ಪ್ರಥಮ— ತಾತ, ಎಲ್ಲರೂ ಹೋಗಲಿಲ್ಲ. ಆಶ್ರಮದ ಪರಿಪಾಲನೆಗಾಗಿ ಮಧ್ಯಮನನ್ನು ಇಲ್ಲಿಯೇ ನಿಲ್ಲಿಸಿದರಂತೆ.

ವೃದ್ಧ— ಹಾಗಾದರೆ ಪಾಂಡವರೆಲ್ಲರೂ ಇದ್ದಂತೆಯೇ ಆಯಿತು.

ಪ್ರಥಮ— ಅವನು ಕೂಡ ಈ ಹೊತ್ತಿನಲ್ಲಿ ವ್ಯಾಯಾಮ ಮಾಡುವುದಕ್ಕಾಗಿ ದೂರ ಪ್ರದೇಶಕ್ಕೆ ಹೋಗಿರುತ್ತಾನೆಂದು ಕೇಳಿದೆ

ವೃದ್ಧ— ಅಯ್ಯೋ, ನಮ್ಮ ಆಸೆ ಬರಿದಾಯಿತು. ಆಗಲಿ, ಮಗು, ಇವನನ್ನು ಸ್ವಲ್ಪ ಮಾತಾಡಿಸಿ ನೋಡುತ್ತೇನೆ.

ಪ್ರಥಮ— ಬೇಡ, ಬೇಡ. ಸುಮ್ಮನೆ ಶ್ರಮಪಡುವುದೇಕೆ?

ವೃದ್ಧ— . ... . *ಆಗಲಿ ನೋಡೋಣ. ಅಯ್ಯಾ, ಪುರುಷ, ನಮಗೆ ಬಿಡುಗಡೆಯುಂಟೋ?

ಘಟೋತ್ಕಚ— ಉಂಟು, ಒಪ್ಪಂದಕ್ಕೊಪ್ಪಿದರೆ.

ವೃದ್ಧ— ಒಪ್ಪಂದವೇನು?

ಘಟೋತ್ಕಚ— ನನಗೆ ಪೂಜ್ಯಳಾದ ತಾಯಿಯಿದ್ದಾಳೆ. ಅವಳು ನನ್ನನ್ನು ಕರೆದು, "ಮಗು, ನನ್ನ ಉಪವಾಸಾಂತ್ಯದ ಪಾರಣೆಗಾಗಿ ಈ ವನ ಪ್ರದೇಶದಲ್ಲಿ ಯಾವನಾದರೊಬ್ಬ ಮನುಷ್ಯನನ್ನು ಹುಡುಕಿ ಕರೆದು ಕೊಂಡು ಬಾ" ಎಂದು ಅಪ್ಪಣೆಮಾಡಿದಳು. ಆದ್ದರಿಂದ ನಿಮ್ಮನ್ನು ಹಿಡಿದುಕೊಂಡೆ.

---

* ಪುತ್ರಂ (ನಿವೇದಪ್ಯರ್ಥಿನೀ?) ಖಲು ಪ್ರಾರ್ಥನಾ.

ಚಾರಿತ್ರಶಾಲಿನಿಯ ಸತಿಯ ನೀನೊಡಗೂಡಿ
ಇಬ್ಬರಣುಗರ ಕೂಡೆ ಬಿಡುಗಡೆಯ ಬಯಸುವೊಡೆ,
ಗುಣದೋಷಗಳ ತೂಗಿ ನೆರೆ ನೋಡಿ ನೀನೆನಗೆ
ಒಬ್ಬ ಪುತ್ರನ ಬಿಟ್ಟುಕೊಟ್ಟು ಕಳುಹುವುದು. ॥ ೧೨ ॥

ವೃದ್ಧ— ಎಲಾ, ನೀಚ ರಾಕ್ಷಸ!

ಶಾಸ್ತ್ರವೆಲ್ಲವನರಿತು ಮುಪ್ಪಾಂತ ನಾನಿಂದು
ಮಾನವರ ಮೆಲ್ಲುವಗೆ ಶೀಲಗುಣವಂತನಹ
ಮಗನನಯ್ಯೋ, ಕೊಟ್ಟದಿನ್ನೆಂತು ಸುಖವ ಪಡೆವೆ! ॥ ೧೩ ॥

ಘಟೋತ್ಕಚ— ಭೂಸುರೋತ್ತಮ ಕೇಳು, ಬೇಡಿಕೊಳೆ ನೀನೊಬ್ಬ
ಮಗನ ಕೊಡದಿರಲಿನ್ನು ಸಕುಟುಂಬನಾಗಿಯೇ
ಬೇಗ ನಾಶವ ಪಡೆಯುವೆ. ॥ ೧೪ ॥

ವೃದ್ಧ— ಇದೇ ನನ್ನ ನಿಶ್ಚಯ.

ಈ ನನ್ನ ದೇಹವಿದು ಕರ್ತವ್ಯಕಾರ್ಯಗಳ
ಮಾಡಿಹುದು; ಮುದಿಯಾಗಿ ಬಾಗಿಹುದು; ವಿಧಿಯಿಂದ
ಸಂಸ್ಕಾರ ಹೊಂದಿಹುದು. ಈ ಶರೀರವನಿಂದು
ಹೋಮಗೈವೆನು ರಾಕ್ಷಸಾಗ್ನಿಯಲಿ ಸುತರಿಗಾಗಿ. ॥ ೧೫ ॥

ಬ್ರಾಹ್ಮಣಿ— ಆರ್ಯ, ಆಗದು, ಹೀಗೆ ಮಾಡಲಾಗದು. ಪತಿಮಾತ್ರ ಧರ್ಮವಾಗಿ ಉಳ್ಳವಳೇ ಪತಿವ್ರತೆಯೆನಿಸಿಕೊಳ್ಳುವಳು. ಫಲವನ್ನು ಪಡೆದಿರುವ ಈ ಶರೀರದಿಂದ ಆರ್ಯನನ್ನೂ ಕುಲವನ್ನೂ ರಕ್ಷಿಸ ಬಯಸುವೆನು.

ಘಟೋತ್ಕಚ— ಪೂಜ್ಯಳಾದ ನಮ್ಮ ತಾಯಿಯು ಹೆಂಗಸನ್ನು ಒಪ್ಪುವುದಿಲ್ಲ.

ವೃದ್ಧ— ನಿನ್ನ ಜೊತೆಯಲ್ಲಿ ನಾನು ಬರುತ್ತೇನೆ.

ಘಟೋತ್ಕಚ— ಆ! ನೀನು ಮುದುಕ, ದೂರ ಹೋಗು.

ಪ್ರಥಮ— ತಾತ, ನಾನು ಸ್ವಲ್ಪ ಹೇಳಬೇಕಾದದ್ದಿದೆ.

ವೃದ್ಧ— ಮಗು, ಹೇಳಪ್ಪಾ.

ಪ್ರಥಮ— ನನ್ನ ಪ್ರಾಣವ ಕೊಟ್ಟು ಗುರುಜನರ ಪ್ರಾಣಗಳ
ರಕ್ಷಿಸಲು ಬಯಸುವೆನು. ಕುಲದ ರಕ್ಷಣೆಗಾಗಿ
ನನ್ನ ನೀನಿವನೊಡನೆ ಬಿಟ್ಟುಕಳುಹಿಂದು. ॥ ೧೬ ॥

ದ್ವಿತೀಯ- ಆರ್ಯ! ಆಗದು, ಆಗದು.

ಶ್ರೇಷ್ಠನಾ ಜ್ಯೇಷ್ಠನೇ ಕುಲದಲೂ ಲೋಕದಲು ;
ಪಿತೃಗಳಿಗು ಪ್ರಿಯನವನು. ಆದರಿಂದಲೀ ನಾನೆ
ನಡೆಯುವೆನು. ಸ್ಮರಿಸಣ್ಣ ಹಿರಿಯರಾಚರಣೆಗಳನು. ॥ ೧೭ ॥

ತೃತೀಯ— ಆರ್ಯರೇ, ಆಗದು, ಆಗದು.

ಬ್ರಹ್ಮವಾದಿಗಳೆಲ್ಲ ಹಿರಿಯಣ್ಣ ತಂದೆಗೆಣೆ
ಯೆನ್ನುವರು. ಆದರಿಂದ ಹಿರಿಯವರ ಪ್ರಾಣಗಳ
ರಕ್ಷಿಸಲು ನಾನೆ ತಕ್ಕವನು. ॥ ೧೮ ॥

ಪ್ರಥಮ— ವತ್ಸ, ಅದಾಗದು.

ತಂದೆಗಾಪತ್ತೊಡನೆ ಹಿರಿಯಮಗ ಕಾಪಾಡಿ
ದಾಟಿಪುದು ಸಮ್ಮತವು. ಆದರಿಂದಲೀ ನಾನೆ
ಗುರುಜನರ ಪ್ರಾಣಗಳ ರಕ್ಷಿಸಲು ನಡೆವೆನಿಂದು. ॥ ೧೯ ॥

ವೃದ್ಧ— ಇಷ್ಟತಮನಾದ ಜ್ಯೇಷ್ಠನನ್ನು ಬಿಟ್ಟುಕೊಡಲಾರೆ.

ಬ್ರಾಹ್ಮಣಿ— ಆರ್ಯನು ಜ್ಯೇಷ್ಠನನ್ನು ಅಪೇಕ್ಷಿಸುವಂತೆಯೇ ನಾನು ಕೂಡ ಕನಿಷ್ಠನನ್ನು ಅಪೇಕ್ಷಿಸುತ್ತೇನೆ

ದ್ವಿತೀಯ— ತಾಯಿತಂದೆಗಳಿಗೆ ಅನಿಷ್ಟನಾದವನು ಈಗ ಯಾರಿಗೆ ಪ್ರಿಯನಾದೇನು ?

ಘಟೋತ್ಕಚ—ನಾನು ಪ್ರೀತನಾಗಿದ್ದೇನೆ, ಬೇಗ ಬಾ.

ದ್ವಿತೀಯ — ಧನ್ಯನಾದೆನು ಗುರುಗಳಸುಗಳನು ರಕ್ಷಿಸಲು
ನನ್ನಸುವ ಕೊಟ್ಟು. ಬಂಧುಗಳ ಮೇಲಿನಾ
ಸ್ನೇಹವೆನಿತಗ್ಗಳವೊ ! ಆದಕಾಗಿ ಯಮನೊಡನೆ
ದೊರಕುವಾ ಸ್ನೇಹ ದುರ್ಲಭವಲ್ಲವೇ ? ॥ ೨೦ ॥

ಘಟೋತ್ಕಚ — ಅಬ್ಬಾ, ಈ ಬ್ರಾಹ್ಮಣ ವಟುವಿಗೆ ಸ್ವಜನರಲ್ಲಿ ಎಷ್ಟು ವಾತ್ಸಲ್ಯವಿದೆಯಪ್ಪಾ!

ದ್ವಿತೀಯ — ತಾತ, ವಂದಿಸುತ್ತೇನೆ.

ವೃದ್ಧ — ಬಾ, ಮಗು, ಬಾ.

ಗುರುಜನರ ಪ್ರಾಣಕ್ಕೆ ಬದಲಾಗಿ ಪ್ರಾಣವನು
ಕೊಟ್ಟ ಗುರುವತ್ಸಲನೆ, ಆತ್ಮನನು ತಿಳಿಯದರು
ಪಡೆಯಲಾರದ ಬ್ರಹ್ಮಲೋಕ ಸಿದ್ಧಿಸಲಿ ನಿನಗೆ. ॥ ೨೧ ॥

ದ್ವಿತೀಯ — ಅನುಗೃಹೀತನಾದೆ. ಅಮ್ಮಾ, ವಂದಿಸುತ್ತೇನೆ.

ಬ್ರಾಹ್ಮಣಿ — ಮಗು, ಬಹುಕಾಲ ಬಾಳು.

ದ್ವಿತೀಯ — ಅನುಗೃಹೀತನಾದೆ. ಆರ್ಯ, ವಂದಿಸುತ್ತೇನೆ.

ಪ್ರಥಮ — ಬಾ, ವತ್ಸ, ಬಾ.

ಶುಭಗುಣಗಳಪ್ಪಿರುವ ನೀನೆನ್ನ ಬಿಗಿದಪ್ಪು.
ನಿನ್ನ ಕೀರ್ತಿಯನಪ್ಪಿ ನಲಿವಳೀ ಭೂಮಿ ಮುಂದೆ. ॥ ೨೨ ॥

ದ್ವಿತೀಯ — ಅನುಗೃಹೀತನಾದೆ.

ತೃತೀಯ — ಆರ್ಯ, ವಂದಿಸುತ್ತೇನೆ.

ದ್ವಿತೀಯ — ಸ್ವಸ್ತಿ.

ತೃತೀಯ — ಅನುಗೃಹೀತನಾದೆ.

ದ್ವಿತೀಯ — ಅಯ್ಯಾ ಪುರುಷ, ಸ್ವಲ್ಪ ಹೇಳಬೇಕಾದ್ದಿದೆ.

---

* ಬಂಧು ಸ್ನೇಹಾದ್ಧಿ ಮಹತಃ ಕಾಲಸ್ನೇಹಸ್ತು ದುರ್ಲಭಃ

ಘಟೋತ್ಕಚ—ಹೇಳು, ಹೇಳು, ಬೇಗ ಹೇಳು.

ದ್ವಿತೀಯ—ಈ ವನದಲ್ಲಿ ಜಲಾಶಯವಿರುವಂತೆ ಕಾಣುತ್ತದೆ. ಪರಲೋಕಕ್ಕೆ ಹೊರಡಲು ಸಿದ್ಧನಾಗಿರುವ ನಾನು ಅಲ್ಲಿ ಹೋಗಿ ಬಾಯಾರಿಕೆಯನ್ನು ಪರಿಹರಿಸಿಕೊಂಡು ಬರುತ್ತೇನೆ.

ಘಟೋತ್ಕಚ—ದೃಢವಾದ ನಿಶ್ಚಯವುಳ್ಳವನೇ, ಹೋಗು. ತಾಯಿಗೆ ಆಹಾರ ಕಾಲ ಮೀರಿಹೋಗುತ್ತಿದೆ. ಬೇಗ ಬಾ.

ದ್ವಿತೀಯ—ತಾತ, ಇಗೋ ಹೋಗುತ್ತೇನೆ (ಹೋಗುತ್ತಾನೆ)

ವೃದ್ಧ—ಅಯ್ಯೋ, ಅಯ್ಯೋ, ಸೂರೆಹೋಯಿತಪ್ಪಾ, ಸೂರೆಹೋಯಿತು!

ಮೂರು ಶಿಖರಗಳಿಂದ ಸುಂದರಾಕೃತಿಯಾಂತು
ಮೆರೆದುದೆನ್ನಯ ವಂಶಪರ್ವತವು. ಮಧ್ಯದಾ
ಶಿಖರ ಮುರಿಯಲು ಮಿಗಿಲು ತಪಿಸುವುದು ಮನವು. ॥ ೨೩ ॥

ಹಾ, ಪುತ್ರ! ಏನು, ಹೋಗಿಯೇಬಿಟ್ಟೆಯಲ್ಲಾ!

ಎಲೆ ತರುಣ! ತರುಣತೆಗೆ ದೊರೆಯೆನಿಪ ಕಾಂತಿಯನು
ತಳೆದೆಸೆವ ಸೊಬಗ! ನಿಯಮವಿನಿತನು ಮೀರ
ದಧ್ಯಯನದಲಿ ಮನವನಿಟ್ಟ ಧೀಮಂತಾ!
ಮದಿಸಿದಾನೆಯ ದಂತದೇಟಿನಲಿ ಮುರಿದು ನೆಲ
ಕೊರಗುವಾ ಹೂಬಿಟ್ಟ ಮರದಂತೆ ಹಾ, ಮಗನೆ,
ನೀನೆಂತು ನಾಶವೈದುವೆಯೋ! ॥ ೨೪ ॥

ಘಟೋತ್ಕಚ—ಬ್ರಾಹ್ಮಣ ವಟುವು ತಡಮಾಡುತ್ತಿರುವನು. ತಾಯಿಯ ಆಹಾರಕಾಲ ಮೀರುತ್ತ ಬಂತು. ಏನು ಮಾಡಲಿ? ಆಗಲಿ, ತಿಳಿಯಿತು. ಅಯ್ಯಾ ಬ್ರಾಹ್ಮಣ, ನಿನ್ನ ಮಗನನ್ನು ಕೂಗು.

ವೃದ್ಧ— ಆಃ! ನಿನ್ನ ಮಾತು ರಾಕ್ಷಸರಿಗೂ ಮೀರಿದಷ್ಟು ಕ್ರೂರವಾಗಿದೆ.

ಘಟೋತ್ಕಚ— ಏನು, ಕೋಪ ಬಂದಿತೇ? ಕ್ಷಮಿಸಿ ಸ್ವಾಮಿ, ಕ್ಷಮಿಸಿ. ಇದು ನನ್ನ ಪ್ರಕೃತಿಯ ದೋಷ. ಹೋಗಲಿ, ನಿನ್ನ ಮಗನ ಹೆಸರೇನು?

ವೃದ್ಧ—ಇದನ್ನು ಕೂಡ ಕೇಳುವುದಕ್ಕೆ ಶಕ್ಯವಲ್ಲ.

ಘಟೋತ್ಕಚ— ಸ್ವಾಮಿ, ಇದು ಯುಕ್ತವಾದದ್ದೇ. ಅಯ್ಯಾ ಬ್ರಾಹ್ಮಣ ಕುಮಾರ, ನಿನ್ನ ತಮ್ಮನಿಗೆ ಏನು ಹೆಸರು?

ಪ್ರಥಮ— ನಿರ್ಭಾಗ್ಯ ಮಧ್ಯಮ

ಘಟೋತ್ಕಚ — ಮಧ್ಯಮನೆಂಬುದು ಇವನಿಗೆ ಚೆನ್ನಾಗಿ ಒಪ್ಪುತ್ತದೆ. ನಾನೇ ಕೂಗುತ್ತೇನೆ. ಅಯ್ಯಾ ಮಧ್ಯಮಾ, ಅಯ್ಯಾ ಮಧ್ಯಮಾ, ಬೇಗ ಬಾ

(ಆಮೇಲೆ ಭೀಮಸೇನನು ಪ್ರವೇಶಿಸುತ್ತಾನೆ)

ಭೀಮಸೇನ — ಈ ಸ್ವರ ಯಾರದ್ದಿರಬಹುದು!

ನೂರಾರು ಹಕ್ಕಿಗಳ ಕಲಕಲಧ್ವನಿ ತುಂಬಿ,
ಮುಂದಕಡಿಯಿಡದಂತೆ ದೊಡ್ಡ ಮರಗಳು ಹಬ್ಬಿ,
ಸಂಕಟಕೆ ಬೀಡಾದ ದಟ್ಟಡವಿಯೊಡಲಿಂದ
ತಾರದಲಿ ಕೂಗುವನು. ಈ ದನಿಯನಾಲಿಸಲು
ನನ್ನ ಮನದೊಳಗೆಂತೊ ಕಳವಳವು ತೋರುವುದು
ಈ ದನಿ ಧನಂಜಯನ ದನಿಯ ಮಿಗೆ ಹೋಲುತಿಹುದು. ||೨೫||

ಘಟೋತ್ಕಚ— ಬ್ರಾಹ್ಮಣ ವಟುವು ತಡಮಾಡುತ್ತಿರುವನಲ್ಲಾ. ತಾಯಿಯ ಊಟದ ಹೊತ್ತು ಮೀರುತ್ತ ಬಂತು. ಏನು ಮಾಡಲಿ? ಆಗಲಿ, ತಿಳಿಯಿತು. ಗಟ್ಟಿಯಾಗಿ ಕೂಗುತ್ತೇನೆ. ಅಯ್ಯಾ ಮಧ್ಯಮಾ, ಬೇಗ ಬಾ.

ಭೀಮಸೇನ— ಯಾರಿವನು, ಈ ಕಾಡಿನ ನಡುವೆ ನನ್ನ ವ್ಯಾಯಾಮಕ್ಕೆ ವಿಘ್ನವನ್ನುಂಟುಮಾಡಿ 'ಮಧ್ಯಮಾ, ಮಧ್ಯಮಾ' ಎಂದು ನನ್ನನ್ನು ಕೂಗುತ್ತಿರುವವನು? ಆಗಲಿ, ನೋಡೋಣ. (ಮುಂದೆ ಹೋಗಿ ನೋಡಿ) ಓಹೋ, ಈ ಪುರುಷನು ಎಷ್ಟು ರಮ್ಯನಾಗಿ ಕಾಣುತ್ತಿದ್ದಾನೆ! ಇವನನ್ನು ನೋಡಿದರೆ,

ಕೇಸರಿಯ ಮುಖ, ಮತ್ತೆ ಕೇಸರಿಯ ಕೋರೆಗಳು,
ಜೇನಿನಂದದ ಕಣ್ಣು, ಕಂದುಬಣ್ಣದ ಹುಬ್ಬು,
ಗಿಡಗನಂದದ ಮೂಗು, ಆನೆಯ ಕಪೋಲಗಳು,
ಸ್ನಿಗ್ಧಗಂಭೀರ ರವ, ನಿಡಿದಾಗಿ ಬೆಳೆದಿರುವ
ಕೆದರುಗೂದಲು, ಮುಂದಕುಬ್ಬಿರುವ ಹರಡಿದೆದೆ,
ವಜ್ರದೊಲು ಬಲ್ಪಾಂತ ನಡು, ಮಾಂಸ ತುಂಬಿರುವ
ಹೆಗಲು, ಬಹು ಬಿಗುಪಾಂತ ನಿಡುದೋಳುಮದ್ದಾನೆ
ಗೂಳಿಗಳ ನಡೆಯ ಹೋಲುವ ನಡಗೆ— ಇಂತಿವನು
ವಿಪುಲ ಬಲವಂತನೆನೆ ತೋರುವನು. ರಾಕ್ಷಸಿಯ
ಹೊಟ್ಟೆಯಲಿ ಹುಟ್ಟಿಹನು, ಲೋಕವೀರನ ಸುತನೆ
ಸರಿಯಿವನು. ಸಂದೇಹವಿರದು. || ೨೬ ||

ಘಟೋತ್ಕಚ— ಬ್ರಾಹ್ಮಣ ವಟುವು ತಡಮಾಡುತ್ತಿರುವನು; ತಾಯಿಗೆ ಊಟದ ಹೊತ್ತು ಮೀರುತ್ತ ಬಂತು. ಈಗೇನು ಮಾಡಲಿ? ಆಗಲಿ, ಗಟ್ಟಿಯಾಗಿ ಕೂಗುತ್ತೇನೆ. 'ಅಯ್ಯಾ, ಅಯ್ಯಾ, ಮಧ್ಯಮಾ, ಬೇಗ ಬಾ.'

ಭೀಮಸೇನ— ಇಗೋ, ಬಂದೆ

ಘಟೋತ್ಕಚ—ಇವನು ಬ್ರಾಹ್ಮಣ ವಟುವಲ್ಲ. ಆಹಾ, ಈ ಪುರುಷನು ನೋಟಕ್ಕೆ ಎಷ್ಟು ಮನೋಹರನಾಗಿದ್ದಾನೆ! ಇವನಿಗಾದರೋ,

ಆಕೃತಿಯು ಸಿಂಹಕೆಣೆ. ಕನಕತಾಳಗಳೆರಡ
ಹೋಲುತಿವೆ ತೋಳುಗಳು. ನಡುವೆ ಮೈ ಸಣ್ಣಗಿದೆ.
ಮುಚ್ಚಿರುವ ಗರುಡನಾ ರೆಕ್ಕೆಗಳನನುಕರಿಸಿ
ಪಕ್ಕಗಳು ಕೈಯಿಂದ ಸವರಿದಂತೆಸೆಯುತಿವೆ
ಈ ಪುರುಷ, ಬಿರಿದ ತಾವರೆಯೆಸಳ ಕಣ್ಣುಳ್ಳ
ವಿಷ್ಣುವೇ ಇರಬಹುದು. ಬಂಧು ಬಂದಂತೆನ್ನ
ಕಣ್ಣುಗಳ ನೋಟವನು ತನ್ನೆಡೆಗೆ ಸೆಳೆಯುತಿಹನು. || ೨೭ ||

ಅಯ್ಯಾ ಮಧ್ಯಮಾ, ನಿನ್ನನ್ನಯ್ಯಾ ನಾನು ಕೂಗುತ್ತಿರುವುದು.

ಭೀಮಸೇನ— ಅದರಿಂದಲೇ ನಾನು ಬಂದಿರುವುದು

ಘಟೋತ್ಕಚ— ಏನು, ನೀನೂ ಮಧ್ಯಮನೇ ?

ಭೀಮಸೇನ— ಮತ್ತೆ ಯಾರೂ ಅಲ್ಲ. ನಾನು

ಮಧ್ಯಮನವಧ್ಯರಲಿ, ಮಧ್ಯಮನು ಧೀರರಲಿ,
ಮಧ್ಯಮನು ಭೂಮಿಯಲಿ, ಕೇಳು ಕೇಳಿಲೆ ಭದ್ರ,
ಸೋದರರ ಗಣದಲೂ ನಾನೆ ಮಧ್ಯಮನು. || ೨೮ ||

ಘಟೋತ್ಕಚ— ಇರಬಹುದು.

ಭೀಮಸೇನ— ಇದೂ ಅಲ್ಲದೆ,

ಪಂಚಭೂತಂಗಳಿಗೆ ಮಧ್ಯಮನು, ಪಾರ್ಥಿವರ
ಗಡಣದಲಿ ಮಧ್ಯಮನು, ಜನ್ಮದಲಿ ಮಧ್ಯಮನು,
ಲೋಕದಲಿ ಸರ್ವ ಕಾರ್ಯಗಳೊಳಗು ಮಧ್ಯಮನು. || ೨೯ ||

ವೃದ್ಧ— ಮಧ್ಯಮನು ನಾನೆಂಬ ನುಡಿಯಿಂದ ಪಾಂಡುಸುತ
ಮಧ್ಯಮನೆ ಸರಿಯಿವನು. ನಮ್ಮನೀ ಮೃತ್ಯುವಿನ
ದರ್ಪದಿಂದುದ್ಧರಿಸಿ ಬದುಕಿಸಲು ಬಂಹನಿವನು. || ೩೦ ||

( ಮಧ್ಯಮನು ಪ್ರವೇಶಿಸುತ್ತಾನೆ )

ಮಧ್ಯಮ— ಈ ಬಳಿಯ ತಾವರೆಯ ಕೊಳದಲಾಚಮಗೈದು,
ಪರಲೋಕದಲಿ ನನಗೆ ದೊರೆಯಲರಿದೆನಿಸಿದಾ
ಹೊಳೆವ ನಿರ್ಮಲ ಜಲವ ಪದ್ಮಪತ್ರದೊಳಿತ್ತಿ
ನನಗೆ ನಾನೇ ಕೊಟ್ಟುಕೊಂಡೆನಂಜಲಿಯ. || ೩೧ ||

( ಸಮೀಪಕ್ಕೆ ಹೋಗಿ )

ಅಯ್ಯಾ, ಪುರುಷ ; ಇಗೋ ಬಂದಿದ್ದೇನೆ.

ಘಟೋತ್ಕಚ— ಈಗ ಬಂದಿರುವೆ ! ಮಧ್ಯಮಾ, ಮಧ್ಯಮಾ, ಇತ್ತಬಾ, ಇತ್ತಬಾ.

ವೃದ್ಧ— (ಭೀಮನ ಹತ್ತಿರ ಹೋಗಿ) ಅಯ್ಯಾ ಮಧ್ಯಮ, ಬ್ರಾಹ್ಮಣ ಕುಲವನ್ನು ಕಾಪಾಡು.

ಭೀಮಸೇನ— ಹೆದರಬೇಡಿ, ಹೆದರಬೇಡಿ. ನಾನು ಮಧ್ಯಮ ವಂದಿಸುತ್ತೇನೆ.

ವೃದ್ಧ— ವಾಯುವಿನಂತೆ ದೀರ್ಘಾಯುವಾಗು.

ಭೀಮಸೇನ— ಅನುಗೃಹೀತನಾದೆ. ಆರ್ಯನ ಭಯಕ್ಕೆ ಕಾರಣವೇನು?

ವೃದ್ಧ— ಕೇಳು. ನಾನು, ಕುರುರಾಜನಾದ ಯುಧಿಷ್ಠಿರನು ಹಿಂದೆ ಆಳುತ್ತಿದ್ದ ಕುರುಜಾಂಗಲ ದೇಶದ ಯೂಪಗ್ರಾಮದಲ್ಲಿ ವಾಸಿಸುವ, ಮಾಠರ ಸಗೋತ್ರದ ಕಲ್ಪಶಾಖೆಯ ಅಧ್ವರ್ಯುವಾದ ಕೇಶವದಾಸನೆಂಬ ಬ್ರಾಹ್ಮಣನು. ನನಗೆ ಉತ್ತರ ದಿಕ್ಕಿನಲ್ಲಿ ಉದ್ಯಾಮಕ ಗ್ರಾಮದಲ್ಲಿ ವಾಸಮಾಡುವ ಕೌಶಿಕ ಸಗೋತ್ರದ ಯಜ್ಞಬಂಧುವೆಂಬ ಸೋದರಮಾವನಿದ್ದಾನೆ. ಅವನ ಮಗನ ಉಪನಯನಕ್ಕೋಸ್ಕರ ಹೆಂಡತಿಯೊಡನೆ ಹೊರಟಿದ್ದೇನೆ.

ಭೀಮಸೇನ— ಮಾರ್ಗವು ನಿಷ್ಕಂಟಕವಾಗಲಿ. ಆಮೇಲಾಮೇಲೆ?

ವೃದ್ಧ— ಆಮೇಲೆ,

ನೀರುಂಡ ಮುಗಿಲಂತೆ ಮೈಯಾಂತು, ತಾವರೆಯ
ದಳದಂತೆ ದೊಡ್ಡ ಕಣ್ಣುಗಳಾಂತು, ಸಿಂಹಮುಂ
ಬರಿವಂತೆ ಲೀಲೆಯಲಿ ನಡೆಯುತ್ತ, ಕಟ್ಟುಗ್ರ
ರೂಪದಾ ಕೋರೆಗಳ ಕುಣಿಸುತ್ತ ಮೆರೆಯುವೀ
ರಕ್ಕಸನು, ನಿನ್ನಂಥರೆದುರಿನಲೆ ಶಂಕೆಯಿನಿ
ತಿಲ್ಲದೆಯೆ ಮೇಲ್ವಾಯ್ದು, ಸತಿಸುತರನೊಡಗೊಂಡ
ನನ್ನನಯ್ಯೋ! ಕೊಲ್ಲ ಬಯಸುತ್ತ ಬಂದನಿಂದು. ॥ ೩೨ ॥

ಭೀಮಸೇನ— ಹೀಗೋ! ಇವನು ಬ್ರಾಹ್ಮಣರ ದಾರಿಗೆ ಅಡ್ಡಬಂದು ವಿಘ್ನ ಮಾಡಿದನೋ! ಆಗಲಿ, ಇವನನ್ನು ನಿಗ್ರಹಿಸುತ್ತೇನೆ. ಆಯ್ಯಾ ಪುರುಷ, ನಿಲ್ಲು, ನಿಲ್ಲು.

ಘಟೋತ್ಕಚ — ಇಗೋ, ನಿಂತಿದ್ದೇನೆ.

ಭೀಮಸೇನ — ಈ ಬ್ರಾಹ್ಮಣನನ್ನೇಕೆ ಪೀಡಿಸುತ್ತಿರುವೆ ?

ಸುತರೆಂಬ ತಾರೆಗಳು ಬಳಸಿರಲು, ಸತಿಯೆಂಬ
ತಂಪೆರೆವ ಬೆಳ್ದಿಂಗಳೊಡಗೂಡಿ, ವೃದ್ಧನಹ
ವಿಪ್ರಚಂದ್ರನಿಗಿಂದು ರಾಹುವೆನೆ ಬಂದೆ ನೀನು. || ೩೩ ||

ಘಟೋತ್ಕಚ — ನಿಜ. ರಾಹುವೇ !

ಭೀಮಸೇನ — ಆಃ !

ಸರ್ವಾಪರಾಧಗಳ ಮಾಡಿದರು ಕೊಲೆ ಸಲ್ಲ
ದೀತನಿಗೆ ವ್ಯವಹಾರಗಳನಿವನು ತೊರೆದಿಹನು
ಅದರಿಂದ ಸತಿಸುತರನೊಡಗೊಂಡು ಬಂದಿರುವ
ದ್ವಿಜವರನ ಪೀಡಿಸದೆ ಬಿಟ್ಟುಕಳುಹಿಂದು || ೩೪ ||

ಘಟೋತ್ಕಚ — ಬಿಡುವುದಿಲ್ಲ.

ಭೀಮಸೇನ — (ತನ್ನಲ್ಲಿ ತಾನು) ಆಹಾ, ಇವನು ಯಾರ ಮಗನಾಗಿರಬಹುದು?

ಯಾರಿವನು ? ನನ್ನೆಲ್ಲ ಸೋದರರ ಗುಣಗಳನು
ಸೆಳೆದುಕೊಂಡಂತಿಹನು ; ಈ ಬಾಲವೀರ್ಯವನು
ನೋಡಲಭಿಮನ್ಯುವಿನ ನೆನಪೆನಗೆ ಬರುತಲಿಹುದು. || ೩೫ ||

(ಪ್ರಕಾಶವಾಗಿ) ಅಯ್ಯಾ ಪುರುಷ, ಬಿಟ್ಟುಬಿಡು.

ಘಟೋತ್ಕಚ — ಬಿಡುವುದಿಲ್ಲ.

ನಮ್ಮ ತಂದೆಯೆ ಬಂದು ಬಿಡುವಂತೆ ಹೇಳಿದರು
ಬಿಡೆನಿಂದು ; ಮಾತೆಯಾಜ್ಞೆಯನಾಂತು ಹಿಡಿದೆ ನಾನು. || ೩೬ ||

ಭೀಮಸೇನ — (ತನ್ನಲ್ಲಿ ತಾನು) ಏನು, ತಾಯಿಯ ಆಜ್ಞೆಯೆ ? ಓಹೋ, ಈತನು ಗುರುಶುಶ್ರೂಷಾಸಕ್ತನಾಗಿ ತೊಳಲುತ್ತಿದ್ದಾನೆ !

ಎಲ್ಲ ದೇವರಿಗಿಂತ ಹಿರಿಯ ದೇವತೆ ಮಾತೆ.
ಮಾತೆಯಾಜ್ಞೆಯನಾಂತೆ ನಮ್ಮ ಗತಿಯಿಂತಾಯ್ತು. || ೩೭ ||

(ಪ್ರಕಾಶವಾಗಿ) ಅಯ್ಯಾ ಪುರುಷ, ಸ್ವಲ್ಪ ಕೇಳಬೇಕಾದ ವಿಷಯ ವಿದೆಯಲ್ಲ!

**ಘಟೋತ್ಕಚ**— ಕೇಳು, ಕೇಳು. ಬೇಗ ಕೇಳು.

**ಭೀಮಸೇನ**— ನಿಮ್ಮ ತಾಯಿಯ ಹೆಸರೇನು?

**ಘಟೋತ್ಕಚ**— ಹಿಡಿಂಬೆಯೆಂಬ ರಾಕ್ಷಸಿ. ಆಕೆಯು,

ಕೌರವ್ಯಕುಲದೀಪನೆನಿಪಾ ಮಹಾತ್ಮನನು
ಪಾಂಡುಸುತನನು ವರಿಸಿ ಭಾಗ್ಯವತಿಯೆನಿಸಿದಳು,
ಪೂರ್ಣಚಂದ್ರನ ಕೂಡಿ ಗಗನ ಶೋಭಿಸುವಂದದಿ. ॥ ೩೮ ॥

**ಭೀಮಸೇನ**—(ಹರ್ಷದಿಂದ ತನ್ನಲ್ಲಿ ತಾನು) ಹೀಗೋ! ಇವನು ಹಿಡಿಂಬೆಯ ಮಗನು; ಈ ಗರ್ವವು ಇವನಿಗೆ ತಕ್ಕದ್ದೇ ಆಗಿದೆ.

ರೂಪದಲಿ, ಸತ್ವದಲಿ, ಬಲದಲೀತನು ತನ್ನ
ಪಿತೃಗಳನೆ ಹೋಲುವನು. ಪ್ರಜೆಗಳಲಿ ಕರುಣೆಯನು
ತೋರಿಸನದೇನಿವನ ಮನದ ಪರಿಯೋ! ॥ ೩೯ ॥

(ಪ್ರಕಾಶವಾಗಿ) ಅಯ್ಯಾ ಪುರುಷ, ಬಿಟ್ಟುಬಿಡು.

**ಘಟೋತ್ಕಚ**— ಬಿಡುವುದಿಲ್ಲ

**ಭೀಮಸೇನ**— ಅಯ್ಯಾ, ಬ್ರಾಹ್ಮಣ, ನಿನ್ನ ಮಗನನ್ನು ಕರೆದುಕೊ. ಇವನ ಸಂಗಡ ನಾನು ಹೋಗುತ್ತೇನೆ.

**ದ್ವಿತೀಯ**— ಬೇಡ, ಬೇಡ, ನೀನು ಹೀಗೆ ಮಾಡಬೇಡ.

ಗುರುಗಳಸುಗಳನುಳಿಸೆ ನನ್ನಸುವನೀವೊದಲೆ
ಮಾಸಲಿಟ್ಟಿಹೆನಯ್ಯ. ನಿಲ್ಲು, ನೀ ಯವ್ವನಿಗ,
ರೂಪಯುತ, ಗುಣವಂತ. ನಿಲ್ಲು ಭೂಮಂಡಲದಲಿ. ॥ ೪೦ ॥

**ಭೀಮಸೇನ**— ಆರ್ಯ, ಅದಾಗದು. ನಾನು ಕ್ಷತ್ರಿಯ ಕುಲದಲ್ಲಿ ಹುಟ್ಟಿದವನು. ಬ್ರಾಹ್ಮಣರು ಪೂಜ್ಯತಮರಷ್ಟೆ. ಆದರಿಂದ ಬ್ರಾಹ್ಮಣನ ಶರೀರಕ್ಕೆ ಬದಲಾಗಿ ನನ್ನ ಶರೀರವನ್ನು ಕೊಟ್ಟು ಅದಲುಬದಲು ಮಾಡಿಕೊಳ್ಳಬೇಕೆಂದು ಇಚ್ಛಿಸುತ್ತೇನೆ.

ಘಟೋತ್ಕಚ— ಹೀಗೊ ! ಇವನು ಕ್ಷತ್ರಿಯನು. ಅದರಿಂದಲೇ ಗರ್ವ. ಆಗಲಿ, ಇವನನ್ನೇ ಕೊಂದು ತೆಗೆದುಕೊಂಡು ಹೋಗುತ್ತೇನೆ. ಇವನನ್ನು ತಡೆದವನು ಯಾರು ?

ಭೀಮಸೇನ— ನಾನು.

ಘಟೋತ್ಕಚ— ಏನು, ನೀನೋ ?

ಭೀಮಸೇನ— ಹೌದು, ನಾನು.

ಘಟೋತ್ಕಚ— ಹಾಗಾದರೆ ನೀನೇ ಬಂದುಬಿಡು.

ಭೀಮಸೇನ— ಅತಿವೀರ್ಯಬಲಗಳುಳ್ಳ ನಾನು ( ಒಬ್ಬನನ್ನು) ಹಿಂಬಾಲಿಸಿ ಹೋಗುವವನಲ್ಲ. ನಿನಗೆ ಶಕ್ತಿಯಿದ್ದರೆ ಬಲಾತ್ಕಾರದಿಂದ ನನ್ನನ್ನು ಕರೆದುಕೊಂಡು ಹೋಗು.

ಘಟೋತ್ಕಚ— ನಾನು ಯಾರು, ಗೊತ್ತಾಯಿತೋ ?

ಭೀಮಸೇನ— ನೀನು ನನ್ನ ಮಗನೆಂದು ಬಲ್ಲೆ.

ಘಟೋತ್ಕಚ— ಏನು, ಏನು, ನಿನ್ನ ಮಗನೆ? ಹೇಗೆ ನಿನ್ನ ಮಗ ?

ಭೀಮಸೇನ— ಓಹೋ, ಕೋಪ ಬಂದಿತೋ ? ತಾಳಿಕೋ, ತಾಳಿಕೋ. ಕ್ಷತ್ರಿಯರು ಪ್ರಜೆಗಳೆಲ್ಲರನ್ನೂ ಮಕ್ಕಳೆಂದೇ ಕರೆಯುತ್ತಾರೆ. ಆದರಿಂದಲೇ ನಾನು ಹಾಗೆಂದದ್ದು.

ಘಟೋತ್ಕಚ— ಹೆದರಿದವರ ಆಯುಧವನ್ನು ಹಿಡಿದುಬಿಟ್ಟಿಯಲ್ಲಾ !

ಭೀಮಸೇನ— ಸತ್ಯದಾಣೆಯನಿಟ್ಟು ನುಡಿಯುವೆನು. ಭಯವೆಂದ
ರೇನೆಂದು ಕಂಡರಿಯೆನದನಿಂದು ನಿನ್ನಿಂದ
ತಿಳಿಯಬೇಕೆಂದಿರುವೆನಾಭಯವದೆಂತಿಹುದು ?
ಹೇಳಯ್ಯ, ಕೇಳುವೆನು. ಅದರ ಗುಣದೋಷಗಳ
ಮೊದಲರಿತು ಆ ಬಳಿಕ ತಕ್ಕಂತೆ ಗೈವೆ ನಾನು. || ೪೧ ||

ಘಟೋತ್ಕಚ —ಇಗೋ, ನಿನಗೆ ಭಯವನ್ನು ಉಪದೇಶಿಸುತ್ತೇನೆ. ಆಯುಧವನ್ನು ಹಿಡಿದುಕೊ.

ಭೀಮಸೇನ — ಆಯುಧವನ್ನೋ? ಹಿಡಿದುಕೊಂಡೇ ಇರುವೆನು.

ಘಟೋತ್ಕಚ — ಅದು ಹೇಗೆ?

ಭೀಮಸೇನ — ಕಾಂಚನಸ್ತಂಭಕ್ಕೆ ಸಮನೆನಿಸಿ, ಶತ್ರುಗಳ
ನಿಗ್ರಹದಲೇ ತೊಡಗಿ ನರ್ತಿಸುವ ಈ ನನ್ನ
ಬಲದೋಳೆ ಸಹಜವಾದಾಯುಧವು ನನಗೆ. ॥ ೪೨ ॥

ಘಟೋತ್ಕಚ — ಇದು ನನ್ನ ತಂದೆಯಾದ ಭೀಮಸೇನನಿಗೆ ಒಪ್ಪುವಂಥದು.

ಭೀಮಸೇನ — ಅದು ಯಾರು, ಆ ಭೀಮನೆಂಬವನು?

ವಿಶ್ವಕರ್ತಗೊ, ಶಿವಗೊ, ಕೃಷ್ಣನಿಗೊ, ಶಕ್ರನಿಗೊ,
ಶಕ್ತಿಧರ ಯಮನಿಗೋ — ಯಾರಿಗೆಣೆಯಿವರೊಳಗೆ
ಹೇಳಯ್ಯ ನಿಮ್ಮ ತಂದೆ? ॥ ೪೩ ॥

ಘಟೋತ್ಕಚ — ಎಲ್ಲರಿಗೂ.

ಭೀಮಸೇನ — ಛಿ, ಇದು ಸುಳ್ಳು.

ಘಟೋತ್ಕಚ — ಏನು, ಏನು? ಸುಳ್ಳೆಂದೆಯಾ? ನನ್ನ ಗುರುವನ್ನು ನಿಂದಿಸುವೆಯೋ? ಆಗಲಿ ಈ ದಪ್ಪ ಮರವನ್ನು ಕಿತ್ತು ಹೊಡೆಯುತ್ತೇನೆ. (ಕಿತ್ತು ಹೊಡೆಯುತ್ತಾನೆ) ಅಬ್ಬಾ, ಇದರಿಂದಲೂ ಕೊಲ್ಲುವುದಕ್ಕೆ ಶಕ್ಯವಾಗಲಿಲ್ಲವಲ್ಲ! ಏನು ಮಾಡಲಿ? ಆಗಲಿ, ತಿಳಿಯಿತು. ಈ ಬೆಟ್ಟದ ಕೋಡುಗಲ್ಲನ್ನು ಕಿತ್ತು ಹೊಡೆಯುತ್ತೇನೆ.

ನಾನಿಟ್ಟ ಕೋಡುಗಲ್ ನಿನ್ನಸುವ ಸೆಳೆದುಯ್ವುದು.

ಭೀಮಸೇನ — ಕಾಡಾನೆ ರೇಗಿದರು ಹುಲಿಯ ಹೆದರಿಸಲರಿಯದು. ॥ ೪೪ ॥

ಘಟೋತ್ಕಚ — ಏನು, ಇದರಿಂದಲೂ ಇವನನ್ನು ಕೊಲ್ಲಲು ಶಕ್ಯವಾಗಲಿಲ್ಲ! ಇನ್ನೇನು ಮಾಡಲಿ? ಆಗಲಿ, ಗೊತ್ತಾಯಿತು.

ಭೀಮಸೇನನ ಮಗನು, ವಾಯುವಿನ ಮೊಮ್ಮಗನು,
ನಾನು. ಬಾಹುಯುದ್ಧದಲೆನಗೆ ಸಮನಿಲ್ಲ.
ನಿಲ್ಲೀಗ, ಚೆನ್ನಾಗಿ ಸನ್ನದ್ಧನಾಗಿ. ॥ ೪೫ ॥

(ಇಬ್ಬರೂ ಬಾಹುಯುದ್ಧ ಮಾಡುತ್ತಾರೆ)

**ಘಟೋತ್ಕಚ** — (ಭೀಮಸೇನನನ್ನು ಪಟ್ಟು ಹಿಡಿದು)

ಗಟ್ಟಿ ಹಗ್ಗಗಳಿಂದಲಾನೆಯನು ಕಟ್ಟುವಂ
ತೆನ್ನ ತೋಳುಗಳಿಂದ ಬಂಧಿಸಿದೆ ನಿನ್ನ.
ತೋಳುಗಳ ಬಲವ ನೀನೀಗೆಂತು ಮೀರಿ ನಡೆವೆ ?

**ಭೀಮಸೇನ** — (ತನ್ನಲ್ಲಿ ತಾನು) ಏನು, ಇವನು ನನ್ನನ್ನು ಹಿಡಿದೇ ಬಿಟ್ಟನು ! ಎಲಾ ಸುಯೋಧನ, ನಿನ್ನ ಶತ್ರುಪಕ್ಷ ಬೆಳೆಯುತ್ತಿದೆ. ರಕ್ಷಣೆ ಮಾಡಿಕೋ. (ಪ್ರಕಾಶವಾಗಿ) ಅಯ್ಯಾ ಪುರುಷ, ಎಚ್ಚರವಾಗಿರು.

**ಘಟೋತ್ಕಚ** — ಎಚ್ಚರವಾಗಿಯೇ ಇದ್ದೇನೆ

**ಭೀಮಸೇನ** — (ಪಟ್ಟಿನ ಕಟ್ಟನ್ನು ಬಿಡಿಸಿಕೊಂಡು)

ಬಿಟ್ಟುಬಿಡು ಬಲವಂತ ನಾನೆಂಬ ದರ್ಪವನು.
ನಿನ್ನ ಸಾರವನೆಲ್ಲ ಕಂಡಿರುವೆನೆಲೆ ವೀರ
ಬಾಹುಯುದ್ಧದಲೆನಗೆ ಬಳಲಿಕೆಯೆ ತಲೆದೋರದು. ॥ ೪೬ ॥

**ಘಟೋತ್ಕಚ** — ಏನು, ಇದರಿಂದ ಕೂಡ ಇವನನ್ನು ಕೊಲ್ಲುವುದಕ್ಕೆ ಶಕ್ಯವಾಗಲಿಲ್ಲ. ಇನ್ನೇನು ಮಾಡಲಿ ? ಆಗಲಿ, ತಿಳಿಯಿತು. ಮಾತೃಪ್ರಸಾದದಿಂದ ದೊರಕಿರುವ ಮಾಯಾಪಾಶವಿದೆ. ಅದರಿಂದ ಇವನನ್ನು ಕಟ್ಟಿ ತೆಗೆದುಕೊಂಡು ಹೋಗುತ್ತೇನೆ. ನೀರೆಲ್ಲಿದೆ ? ಎಲೈ ಗಿರಿಯೇ, ನೀರು ಕೊಡು ಅಗೋ ಸುರಿಯುತ್ತಿದೆ. (ಆಚಮನಮಾಡಿ ಮಂತ್ರವನ್ನು ಜಪಿಸುತ್ತಾನೆ) ಅಯ್ಯಾ, ಪುರುಷ,

ನನ್ನ ಮಾಯಾಪಾಶದಿಂದ ಬಂಧಿತನಾಗಿ
ಮೈಮರೆತು, ಮುಂದಕಡಿಯಿಡಲಾರೆ. ಹಬ್ಬದಲಿ
ಹಗ್ಗಗಳ ಬಿಗಿದ ಶಕ್ರಧ್ವಜವ ಹೋಲುತಿರುವೆ. ॥ ೪೭ ॥

(ಹೀಗೆಂದು ಮಾಯೆಯಿಂದ ಕಟ್ಟುತ್ತಾನೆ)

**ಭೀಮಸೇನ** — ಏನಿದು, ಮಾಯಾಪಾಶದ ಕಟ್ಟಿಗೆ ಸಿಕ್ಕಿಬಿಟ್ಟೆನಲ್ಲಾ ! ಈಗೇನು ಮಾಡಲಿ ? ಮಹೇಶ್ವರ ಪ್ರಸಾದದಿಂದ ದೊರೆತಿರುವ

ಮಾಯಾಪಾಶ ಮೋಕ್ಷದ ಮಂತ್ರವಿದೆ ಅದನ್ನು ಜಪಿಸುತ್ತೇನೆ ನೀರೆಲ್ಲಿದೆ? ಆಗಲಿ. ಅಯ್ಯಾ ಬ್ರಾಹ್ಮಣ ಕುಮಾರ, ಕಮಂಡಲು ವಿನಲ್ಲಿರುವ ನೀರನ್ನು ತೆಗೆದುಕೊಂಡು ಬಾ.

ವೃದ್ಧ— ಇಗೋ, ನೀರು.

(ಭೀಮಸೇನನು ಆಚಮನಮಾಡಿ ಮಂತ್ರವನ್ನು ಜಪಿಸಿ ಮಾಯೆಯನ್ನು ಬಿಡಿಸುತ್ತಾನೆ)

ಘಟೋತ್ಕಚ— ಅಗೋ, ಪಾಶ ಬಿದ್ದುಹೋಯಿತು. ಈಗೇನು ಮಾಡಲಿ? ಆಗಲಿ! ಅಯ್ಯಾ ಪುರುಷ, ಹಿಂದಿನ ಒಪ್ಪಂದವನ್ನು ಸ್ಮರಿಸಿಕೊ.

ಭೀಮಸೇನ— ಒಪ್ಪಂದವೋ? ನೆನಪಾಯಿತು, ನಡೆ ಮುಂದೆ.

(ಇಬ್ಬರೂ ಹೋಗುತ್ತಾರೆ)

ವೃದ್ಧ— ಮಕ್ಕಳಿರಾ, ಏನು ಮಾಡೋಣ? ಈ ವೃಕೋದರನು ಹೋಗುತ್ತಿದ್ದಾನೆ

ಉಗ್ರವಹ ಬಾಹುಬಲ ವೀರ್ಯಗುಣಗಳನಾಂತು
ಉಗ್ರರೂಪವ ತಳೆದು ಹೊಳೆಯುವೀ ರಾಕ್ಷಸನ
ನಾಕ್ರಮಿಸಿ, ಮೆಲ್ಲಮೆಲ್ಲನೆ ಹೋಗುತಿಹನಿವನು.
ಜಡಿಮಳೆಯು ಸುರಿವಂದು ಗೂಳಿಯದು ಲೀಲೆಯಲಿ
ಮಳೆಹನಿಯ ಕೊಡಹುತ್ತ ಮುಂಬರಿಯುವಂತೆ ॥ ೪೮ ॥

ಘಟೋತ್ಕಚ— ಇಲ್ಲಿ ನಿಲ್ಲು. ನೀನು ಬಂದಿರುವುದನ್ನು ತಾಯಿಗೆ ತಿಳಿಸುತ್ತೇನೆ.

ಭೀಮಸೇನ— ಆಗಲಿ, ಹೋಗು

ಘಟೋತ್ಕಚ— (ಹತ್ತಿರ ಹೋಗಿ) ಅಮ್ಮಾ ವಂದಿಸುತ್ತೇನೆ, ನಾನು ಘಟೋತ್ಕಚ. ನೀನು ಬಹುಕಾಲದಿಂದಲೂ ಬಯಸುತ್ತಿದ್ದಂತೆ ನಿನ್ನ ಆಹಾರಕ್ಕಾಗಿ ಒಬ್ಬ ಮನುಷ್ಯನನ್ನು ತಂದಿದ್ದೇನೆ.

ಹಿಡಿಂಬೆ— (ಪ್ರವೇಶಿಸಿ) ಮಗನೆ, ಬಹುಕಾಲ ಬಾಳು. ಎಂಥ ಮನುಷ್ಯನನ್ನು ತಂದಿರುವೆ?

ಘಟೋತ್ಕಚ— ಮಾತಿನಲ್ಲಿ ಮಾತ್ರ ಮನುಷ್ಯ, ವೀರ್ಯದಲ್ಲಲ್ಲ.

ಹಿಡಿಂಬಿ — ಬ್ರಾಹ್ಮಣನೆ ?

ಘಟೋತ್ಕಚ — ಬ್ರಾಹ್ಮಣನಲ್ಲ.

ಹಿಡಿಂಬಿ — ಹಾಗಾದರೆ ಮುದುಕನೆ ?

ಘಟೋತ್ಕಚ — ಮುದುಕನಲ್ಲ.

ಹಿಡಿಂಬಿ — ಹುಡುಗನೆ ?

ಘಟೋತ್ಕಚ — ಹುಡುಗನಲ್ಲ.

ಹಿಡಿಂಬಿ — ಹಾಗಾದರೆ ಅವನನ್ನು ನೋಡೋಣ.

(ಇಬ್ಬರೂ ಮುಂದೆ ಹೋಗುತ್ತಾರೆ)

ಹಿಡಿಂಬಿ — ಏನು, ಈ ಮನುಷ್ಯನನ್ನೇ, ತಂದದ್ದು ?

ಘಟೋಚ್ಕತ — ಅಮ್ಮಾ, ಇವನು ಯಾರು ?

ಹಿಡಿಂಬಿ — ಹುಚ್ಚ, ಇವನು ದೇವತೆ.

ಘಟೋತ್ಕಚ — ಆಃ ! ಯಾರಿಗೆ ?

ಹಿಡಿಂಬಿ — ನಿನಗೂ, ಮತ್ತು ನನಗೂ.

ಘಟೋತ್ಕಚ — ನಿದರ್ಶನವೇನು ?

ಹಿಡಿಂಬಿ — ಇದೇ ನಿದರ್ಶನ. ಆರ್ಯಪುತ್ರನಿಗೆ ಜಯವಾಗಲಿ.

ಭೀಮಸೇನ — (ನೋಡಿ) ಯಾರಿವಳು ? ದೇವೀ ಹಿಡಿಂಬೆ.

ರಾಜ್ಯ ಕೈಬಿಟ್ಟುರುಳಿ ಕಗ್ಗಾಡುಗಳ ನಡುವೆ
ತೊಳಲುತ್ತ ನಾವಿರಲು, ಕರುಣೆಯಿಂದಲೆ ದೇವಿ
ನಮ್ಮ ಸಂತಾಪವನು ತೊಲಗಿಸಿದೆ ನೀನು. ॥ ೪೯ ॥

ಹಿಡಿಂಬೇ, ಏನಿದು ?

ಹಿಡಿಂಬಿ — (ಕಿವಿಯಲ್ಲಿ) ಆರ್ಯಪುತ್ರ, ಇದು ಹೀಗೆ.

ಭೀಮಸೇನ — ಜಾತಿಯಲ್ಲಿ ರಾಕ್ಷಸಿ, ನಡತೆಯಲ್ಲಲ್ಲ.

ಹಿಡಿಂಬಿ — ಹುಚ್ಚ, ತಂದೆಯನ್ನು ವಂದಿಸು.

ಘಟೋತ್ಕಚ— ತಂದೆಯೇ, ನಾನು ಆ ಧಾರ್ತರಾಷ್ಟ್ರವನಕ್ಕೆ ಕಾಡು ಕಿಚ್ಚಾದ ಘಟೋತ್ಕಚನು, ವಂದಿಸುತ್ತೇನೆ. ಪುತ್ರನ ಚಪಲತೆಯನ್ನು ಮನ್ನಿಸಬೇಕು.

ಭೀಮಸೇನ— ಬಾ, ಮಗನೆ, ಬಾ. ನೀನು ಕ್ರಮತಪ್ಪಿ ನಡೆದದ್ದೂ ಮನೋಹರವಾಗಿಯೇ ಇದೆ. (ಹೀಗೆಂದು ಅಪ್ಪಿಕೊಂಡು) ಧಾರ್ತರಾಷ್ಟ್ರವನಕ್ಕೆ ಕಾಡುಕಿಚ್ಚಾಗಿರುವ ಮಕ್ಕಳನ್ನೇ ನಿನ್ನ ಪಿತೃಗಳ ಮನಸ್ಸು ಬಯಸುತ್ತಿರುವುದು. ಮಗು, ಅತಿಬಲಪರಾಕ್ರಮಶಾಲಿಯಾಗು.

ಘಟೋತ್ಕಚ— ಅನುಗೃಹೀತನಾದೆ.

ವೃದ್ಧ— ಹಾಗಾದರೆ ಇವನು ಭೀಮಸೇನನ ಮಗನಾದ ಘಟೋತ್ಕಚನು!

ಭೀಮಸೇನ— ಮಗು, ಪೂಜ್ಯನಾದ ಕೇಶವದಾಸನಿಗೆ ನಮಸ್ಕಾರ ಮಾಡು.

ಘಟೋತ್ಕಚ— ಪೂಜ್ಯ, ವಂದಿಸುತ್ತೇನೆ.

ವೃದ್ಧ— ತಂದೆಗೆ ಸಮಾನವಾದ ಗುಣವಂತನೂ ಕೀರ್ತಿವಂತನೂ ಆಗು.

ಘಟೋತ್ಕಚ— ಅನುಗೃಹೀತನಾದೆ.

ವೃದ್ಧ— ಅಯ್ಯಾ ವೃಕೋದರ, ನೀನು ನಮ್ಮ ಕುಲವನ್ನು ಕಾಪಾಡಿದೆ; ನಿಮ್ಮ ಕುಲವನ್ನೂ ಉದ್ಧರಿಸಿದೆ. ನಾವಿನ್ನು ಹೊರಡುತ್ತೇವೆ.

ಭೀಮಸೇನ— ಈಯೆಲ್ಲ ಶುಭಗಳೂ ನಿಮ್ಮನುಗ್ರಹದಿಂದ<br>
ದೊರಕಿದುವು. ಹತ್ತಿರವೆ ಇರುವುದೆಮ್ಮಾಶ್ರಮವು.<br>
ಅಲ್ಲಿ ವಿಶ್ರಮಿಸಿದ್ದು ಹೋಗಿಬರಬಹುದು ನೀವು. ॥ ೫೦ ॥

ವೃದ್ಧ— ಹೀಗೆ ಜೀವವನ್ನು ಕೊಟ್ಟು ಬದುಕಿಸಿದ್ದರಿಂದಲೇ ಆತಿಥ್ಯವನ್ನು ಮಾಡಿದಂತಾಯಿತು. ಆದ್ದರಿಂದ ನಾವಿನ್ನು ಹೊರಡುತ್ತೇವೆ.

ಭೀಮಸೇನ— ಪೂಜ್ಯರು ಕುಟುಂಬ ಸಮೇತರಾಗಿ ಹೊರಡಬಹುದು. ಮತ್ತೆ ಬಂದು ದರ್ಶನಕೊಡಬೇಕು.

ವೃದ್ಧ— ಆಗಲಿ, ಹಾಗೆಯೇ ಮಾಡೋಣವಂತೆ.

(ಹೆಂಡತಿ ಮಕ್ಕಳೊಡನೆ ಕೇಶವದಾಸನು ಹೊರಡುತ್ತಾನೆ)

ಭೀಮಸೇನ— ಹಿಡಿಂಬೆ, ಹೀಗೆ ಬಾ. ವತ್ಸ, ಘಟೋತ್ಕಚ, ಇತ್ತ ಬಾ. ಪೂಜ್ಯನಾದ ಕೇಶವದಾಸನನ್ನು ಆಶ್ರಮದ ಬಾಗಿಲವರೆಗಾದರೂ ಕಳುಹಿಸಿ ಬರೋಣ.

ಸಾಗರವು ನದಿಗಳಿಗದೆಂತು ಪ್ರಭುವಾಗಿಹುದೊ,
ಅಗ್ನಿಯಾಹುತಿಗಳಿಗದೆಂತು ಪ್ರಭುವಾಗಿಹುದೊ,
ಮನವಿಂದ್ರಿಯಂಗಳಿಗದೆಂತು ಪ್ರಭುವಾಗಿಹುದೊ,
ಅಂತೆಮುಗುಪೇಂದ್ರಭಗವಂತನೇ ಪ್ರಭುವೆನಿಪನು ॥ ೫೧ ॥

(ಎಲ್ಲರೂ ಹೋಗುತ್ತಾರೆ)

ಮಧ್ಯಮ ವ್ಯಾಯೋಗವು ಮುಗಿಯಿತು.

---

## ಪಾತ್ರಗಳು

ಸೂತ್ರಧಾರ

ಧೃತರಾಷ್ಟ್ರ

ದುರ್ಯೋಧನ

ವಾಸುದೇವ

ಸುದರ್ಶನ

ಕಂಚುಕಿ

---

# ದೂತವಾಕ್ಯ

(ನಾಂದಿಯಾದ ಮೇಲೆ ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

ಸೂತ್ರಧಾರ — ನಸುಗೆಂಪಿನುಗುರಿಂದ ನಮುಚಿಯನು ಗಗನದಲಿ
ಕೊಂದು ಲೋಕಂಗಳಿಗೆ ಸೊಗವಿತ್ತನಾವನೋ
ಆ ಉಪೇಂದ್ರನ ಪಾದ ಪಾಲಿಸಲಿ ನಿಮ್ಮನೊಲಿದು. ॥ ೧ ॥

ಆರ್ಯ ಮಹಾಶಯರಲ್ಲಿ ವಿಜ್ಞಾಪನೆ. ಓಹೋ ನಾನು ವಿಜ್ಞಾಪಿಸುವುದರಲ್ಲಿ ತೊಡಗಿರುವಾಗಲೇ ಗದ್ದಲವಾಗುವ ಹಾಗೆ ಕೇಳಿಸುವುದಲ್ಲ! ಇರಲಿ, ನೋಡೋಣ.

(ತೆರೆಯಲ್ಲಿ)

ಎಲೈ ದ್ವಾರಪಾಲಕರೇ, ಮಹಾರಾಜನಾದ ದುರ್ಯೋಧನನು ಹೀಗೆ ಆಜ್ಞೆ ಮಾಡಿದ್ದಾನೆ.

ಸೂತ್ರಧಾರ — ಆಗಲಿ, ತಿಳಿಯಿತು

ಧೃತರಾಷ್ಟ್ರಸುತರಿಗೆ ವಿರೋಧ ಪಾಂಡವರೊಡನೆ
ಸಂಘಟಿಸೆ, ದುರ್ಯೋಧನಾಜ್ಞೆಯಲಿ ಸೇವಕನು
ಸಜ್ಜುಗೊಳಿಸುವನೀಗ ಮಂತ್ರಶಾಲೆಯನು. ॥ ೨ ॥

(ಹೊರಡುತ್ತಾನೆ)

(ಸ್ಥಾಪನೆ ಮುಗಿಯಿತು)

(ಬಳಿಕ ಕಂಚುಕಿಯು ಪ್ರವೇಶಿಸುತ್ತಾನೆ)

ಕಂಚುಕಿ — ಎಲೈ ದ್ವಾರಪಾಲಕರೇ, ಮಹಾರಾಜನಾದ ದುರ್ಯೋಧನನು "ಈಗ ಎಲ್ಲ ರಾಜರೊಡನೆಯೂ ಕಲೆತು ಆಲೋಚಿಸಬೇಕಾಗಿದೆ. ಆದ್ದರಿಂದ ರಾಜರೆಲ್ಲರನ್ನೂ ಕರಸತಕ್ಕದ್ದು"–ಎಂದು ಆಜ್ಞೆ ಮಾಡಿದ್ದಾನೆ. (ಮುಂದೆ ಹೋಗಿ ಸುತ್ತ ನೋಡಿ) ಇಗೋ. ಈ ಮಹಾರಾಜ ದುರ್ಯೋಧನನು ಇತ್ತ ಕಡೆಗೇ ಬರುತ್ತಿದ್ದಾನೆ! ಈತನು,

ಶ್ಯಾಮವರ್ಣನು, ಯುವಕನುತ್ತಮ ಸುಗಂಧಗಳ
ತೊಡೆದಿಹನು, ಬಿಳಿಯ ಬಟ್ಟೆಯನುಟ್ಟು ಹೊದೆದಿಹನು,
ಛತ್ರಚಾಮರಗಡಣದೊಡಗೂಡಿ ಮೆರೆಯುವನು,
ತೊಟ್ಟ ಭೂಷಣಮಣಿಯ ಬೆಳಗಿಂದ ರಂಜಿಸುವ
ತನುಕಾಂತು, ನಕ್ಷತ್ರ ಮಧ್ಯದಲಿ ಹುಣ್ಣಿಮೆಯ
ಚಂದಿರನು ಹೊಳೆವಂತೆ ಹೊಳೆಯುತಿಹನು. || ೩ ||

(ಬಳಿಕ ಮೇಲೆ ಸೂಚಿಸಿದಂತೆ ದುರ್ಯೋಧನನು ಪ್ರವೇಶಿಸುತ್ತಾನೆ)

ದುರ್ಯೋಧನ — ತಟ್ಟನೊದಗಿದ ಯುದ್ಧದುತ್ಸವವ ನೆನೆದೆನ್ನ
ಹೃದಯ ಮುದದಿಂದುಬ್ಬಿ ನಲಿಯುತಿದೆ; ರೋಷವನು
ಪೊರದೂಡಿ ನಲಿಯುತಿದೆ. ಪಾಂಡವರ ದಳದೊಳಗೆ
ನುಗ್ಗಿ, ಮದ್ದಾನೆಗಳ ದಂತಗಳ ಕಿತ್ತೆಸೆದು
ಬಿಸುಡಬೇಕೆಂಬಿಚ್ಛೆ ಬಲಿಯುತಿದೆ ನನಗೆ. || ೪ ||

ಕಂಚುಕಿ — ಮಹಾರಾಜರಿಗೆ ಜಯವಾಗಲಿ. ಮಹಾರಾಜರ ಅಪ್ಪಣೆಯ ಪ್ರಕಾರ ರಾಜರೆಲ್ಲರನ್ನೂ ಕರೆತಂದಾಯಿತು.

ದುರ್ಯೋಧನ — ಒಳ್ಳೆಯದು ನೀನು ಅಂತಃಪುರದೊಳಕ್ಕೆ ಹೋಗು.

ಕಂಚುಕಿ — ಮಹಾರಾಜರು ಆಜ್ಞಾಪಿಸಿದಂತಾಗಲಿ. (ಹೋಗುತ್ತಾನೆ)

ದುರ್ಯೋಧನ — ಆರ್ಯರೇ, ವೈಕರ್ಣವರ್ಷದೇವರೇ, ಹೇಳಿ — ನನಗೆ ಹನ್ನೊಂದಕ್ಷೋಹಿಣೀ ಸಂಖ್ಯೆಯುಳ್ಳ ಸೈನ್ಯಸಂಪತ್ತಿದೆ. ಇದಕ್ಕೆ ಸೇನಾಪತಿಯಾಗಲು ಯಾರು ತಕ್ಕವರು?

ಏನು, ನೀವೇನು ಹೇಳಿದಿರಿ? ಇದು ಬಹು ದೊಡ್ಡ ವಿಚಾರ. ಆಲೋಚನೆಮಾಡಿ ಹೇಳಬೇಕು -- ಎಂದೋ ?

ಇದು ಒಪ್ಪತಕ್ಕದ್ದು. ಆದ್ದರಿಂದ, ಬನ್ನಿ, ಮಂತ್ರಶಾಲೆಗೇ ಹೋಗೋಣ. ಆಚಾರ್ಯ, ವಂದಿಸುತ್ತೇನೆ. ಮಂತ್ರಶಾಲೆಯೊಳಕ್ಕೆ ದಯಮಾಡಿಸಬೇಕು. ಪಿತಾಮಹ, ವಂದಿಸುತ್ತೇನೆ. ಮಂತ್ರಶಾಲೆಯೊಳಕ್ಕೆ ದಯಮಾಡಿಸಬೇಕು. ಮಾವ, ವಂದಿಸುತ್ತೇನೆ. ಮಂತ್ರಶಾಲೆಯೊಳಕ್ಕೆ ದಯಮಾಡಬೇಕು. ಆರ್ಯರೇ, ವೈಕರ್ಣವರ್ಷದೇವರೇ, ತಾವೂ ಒಳಕ್ಕೆ ದಯಮಾಡಿ. ಎಲೈ ಕ್ಷತ್ರಿಯರೇ, ನೀವೆಲ್ಲರೂ ಧಾರಾಳವಾಗಿ ಒಳಕ್ಕೆ ನಡೆಯಿರಿ. ವಯಸ್ಯ ಕರ್ಣ, ನಾವೂ ಒಳಗೆ ಹೋಗೋಣ.

(ಒಳಗೆ ಹೋಗಿ)

ಆಚಾರ್ಯ, ಇದು ಕೂರ್ಮಾಸನ, ಕುಳಿತುಕೊಳ್ಳಬೇಕು. ಅಜ್ಜ, ಇದು ಸಿಂಹಾಸನ, ಕುಳಿತುಕೊಳ್ಳಬೇಕು. ಮಾವ, ಇದು ಚರ್ಮಾಸನ, ಕುಳಿತುಕೊಳ್ಳಬೇಕು. ಆರ್ಯ ವೈಕರ್ಣವರ್ಷದೇವರೇ, ನೀವೂ ಕುಳಿತುಕೊಳ್ಳಿ. ಎಲೈ ಕ್ಷತ್ರಿಯರೇ ನೀವೆಲ್ಲರೂ ಕುಳಿತುಕೊಳ್ಳಬಹುದು.

ಏನೆಂದಿರಿ, ಏನೆಂದಿರಿ? ಇನ್ನೂ ಮಹಾರಾಜನು ಕುಳಿತುಕೊಳ್ಳಲಿಲ್ಲವೆಂದೋ? ಆಹಾ, ಸೇವಾಧರ್ಮದ ರೀತಿಯೇ ಹೀಗೆ. ಇಗೋ ನಾನು ಕುಳಿತುಕೊಳ್ಳುತ್ತೇನೆ ವಯಸ್ಯ ಕರ್ಣ, ನೀನೂ ಕುಳಿತುಕೊ. (ಕುಳಿತುಕೊಂಡು)

ಆರ್ಯರೇ, ವೈಕರ್ಣವರ್ಷದೇವರೇ, ಈಗ ಹೇಳಿ— ನನಗೆ ಹನ್ನೊಂದಕ್ಷೋಹಿಣೀ ಸಂಖ್ಯೆಯುಳ್ಳ ಸೈನ್ಯಸಂಪತ್ತಿದೆ. ಇದಕ್ಕೆ ಸೇನಾಪತಿಯಾಗಲು ಯಾರು ತಕ್ಕವರು ?

ಏನು ಹೇಳಿದಿರಿ ? ಪೂಜ್ಯನಾದ ಗಾಂಧಾರರಾಜನು ಹೇಳುತ್ತಾನೆಂದೋ? ಆಗಲಿ, ಮಾವನೇ ಹೇಳಲಿ.

ಯಾವನು ಹೇಳಿದ್ದೇನು ? ಈ ಪೂಜ್ಯನಾದ ಗಾಂಗೇಯನಿರುವಲ್ಲಿ ಸೇನಾಪತಿಯಾಗಲು ಮತ್ತೆ ಯಾವನು ತಾನೇ ಅರ್ಹನಾದಾನು, ಎಂದಲ್ಲವೇ ?

ಯಾವನು ಚೆನ್ನಾಗಿ ಹೇಳಿದನು ಆಗಲಿ, ಆಗಲಿ ಪಿತಾಮಹನೇ ಆಗಲಿ. ನಮಗೂ ಇದೇ ಅಭಿಲಾಷೆ

ಸೈನಿಕರು ಬೊಬ್ಬಿರಿದು, ಭೇರಿಗಳು ಭೋರ್ಗರೆದು,
ಶಂಖನಾದಗಳೆದ್ದು, ಬಿರುಗಾಳಿಯುಬ್ಬರಕೆ
ಸಿಲ್ಕಿದ ಮಹೋದಧಿಯ ನಾದಕೆಣೆಯೆನಿಸಿರಲು
ಗಾಂಗೇಯಗಭಿಷೇಕ ನಡೆವಂದು, ನೆತ್ತಿಯಲಿ
ಸುರಿವ ಜಲಬಿಂದುಗಳ ಜೊತೆಯಲೇ ಕೆಳಗುರುಳಿ
ಬೀಳಲಿ ನರಾಧಿಪರ ಹೃದಯಗಳು ಮುರಿದು. ॥ ೫ ॥

ಕಂಚುಕಿ — (ಪ್ರವೇಶಿಸಿ) ಮಹಾರಾಜರಿಗೆ ಜಯವಾಗಲಿ, ಪಾಂಡವರ ಶಿಬಿರ ದಿಂದ ದೂತಕಾರ್ಯಕ್ಕಾಗಿ ಪುರುಷೋತ್ತಮನಾದ ನಾರಾಯಣನು ದಯಮಾಡಿಸಿದ್ದಾನೆ.

ದುರ್ಯೋಧನ — ಹಾಗೆನ್ನಬೇಡ, ಬಾದರಾಯಣ. ಏನು ಏನು, ಕಂಸ ಭೃತ್ಯನಾದ ದಾಮೋದರನು ನಿನಗೆ ಪುರುಷೋತ್ತಮನೋ ? ಆ ಗೋವಾಲಕನು ನಿನಗೆ ಪುರುಷೋತ್ತಮನೋ ? ರಾಜ್ಯ, ಕೀರ್ತಿ, ಭೋಗಗಳನ್ನೆಲ್ಲಾ ಜರಾಸಂಧನು ಕಸಿದುಕೊಂಡನಲ್ಲಾ, ಅವನು ನಿನಗೆ ಪುರುಷೋತ್ತಮನೋ ? ಅಬ್ಬಾ, ನೆರೆದ ರಾಜರ ಎದುರಿನಲ್ಲಿ ಆಶ್ರಿತರಾದ ಭೃತ್ಯರ ನಡವಳಿಕೆ ಹೇಗಾಯಿತು ! ಇವನೆಷ್ಟು ಗರ್ವದಿಂದ ಮಾತಾಡುತ್ತಾನೆ ! ಎಲಾ ಅಪಧ್ವಂಸ !

ಕಂಚುಕಿ — ಮಹಾರಾಜರು ಮನ್ನಿಸಬೇಕು. ಗಾಬರಿಯಿಂದ ಉಚಿತ ವಾದ ನಡವಳಿಕೆಯನ್ನು ಮರೆತುಬಿಟ್ಟೆ. (ಕಾಲಿಗೆ ಬೀಳುತ್ತಾನೆ)

ದುರ್ಯೋಧನ — ಗಾಬರಿಯೋ ? ಆ, ಮನುಷ್ಯರೆಲ್ಲರಿಗೂ ಗಾಬರಿಯುಂಟೇ ಉಂಟು. ಏಳು, ಏಳು.

ಕಂಚುಕಿ — ಅನುಗೃಹೀತನಾದೆ

ದುರ್ಯೋಧನ— ಈಗ ನಾನು ಪ್ರಸನ್ನನಾಗಿದ್ದೇನೆ ಯಾರವನು, ದೂತ ನಾಗಿ ಬಂದವನು ?

ಕಂಚುಕಿ —ದೂತನಾಗಿ ಬಂದಿರುವನು ಕೇಶವನು

ದುರ್ಯೋಧನ— ಕೇಶವನೆಂದೆಯಲ್ಲವೆ ? ಹೀಗೆ ಹೇಳಬೇಕು. ಇದೇ ಸರಿಯಾದ ನಡವಳಿಕೆ ಎಲೈ ಎಲೈ ರಾಜರೇ, ದೂತನಾಗಿ ಬಂದಿರುವ ಕೇಶವನಿಗೆ ಏನು ಮಾಡುವುದು ಯುಕ್ತವಾಗಿದೆ ? ನೀವೆಲ್ಲರೂ ಏನು ಹೇಳಿದಿರಿ ? ಕೇಶವನಿಗೆ ಅರ್ಘ್ಯವನ್ನು ಕೊಟ್ಟು ಪೂಜೆ ಮಾಡಬೇಕೆಂದೋ ? ಇದು ನನಗೆ ರುಚಿಸುವುದಿಲ್ಲ. ಇಲ್ಲಿ ಅವನನ್ನು ಹಿಡಿದು ಕಟ್ಟುವುದೇ ಹಿತವೆಂದು ಕಾಣುತ್ತದೆ.

ವಾಸುಭದ್ರನ ಹಿಡಿಯೆ ಪಾಂಡವರ ಕಣ್ಣುಗಳ
ಕಿತ್ತವೋಲಾಗುವುದು ಪಾಂಡವರು ಗತಿಗೆಟ್ಟು
ಮತಿಗೆಟ್ಟು ಕೊರಗುತಿರೆ ದಾಯಾದಿಗಳ ಕಾಟ
ತಪ್ಪಿ, ಧರೆಯೆಲ್ಲವೂ ನನ್ನದಾಗುವುದು. ॥ ೬ ॥

ಮತ್ತೇನೆಂದರೆ, ಇಲ್ಲಿ ಕೇಶವನು ಬಂದಾಗ ಎದ್ದುನಿಂತು ಯಾರು ಅವನಿಗೆ ಮರ್ಯಾದೆಮಾಡುತ್ತಾರೋ ಅವರಿಗೆ ಹನ್ನೆರಡು ಭಾರ ಚಿನ್ನವನ್ನು ದಂಡಹಾಕುತ್ತೇನೆ. ಆದ್ದರಿಂದ ನೀವೆಲ್ಲರೂ ಮೈಮರೆಯದೆ ಜಾಗರೂಕರಾಗಿರಿ. ನಾನು ಏಳದಿರಬೇಕಾದರೆ ಯಾವ ಉಪಾಯವನ್ನವಲಂಬಿಸಲಿ ? ಆಹಾ, ಉಪಾಯವು ಗೊತ್ತಾಯಿತು. ಬಾದರಾಯಣ, ದ್ರೌಪದಿಯ ಜುಟ್ಟು ಬಟ್ಟೆಗಳನ್ನು ಎಳೆದದ್ದನ್ನು ಬರಸಿರುವ ಆ ಚಿತ್ರವನ್ನು ತೆಗೆದುಕೊಂಡು ಬಾ. (ಇತರರಿಗೆ ಕೇಳಿಸದಂತೆ) ಅದರಲ್ಲಿ ದೃಷ್ಟಿಯನ್ನು ನೆಟ್ಟು ಕೇಶವನು ಬಂದಾಗ ಎದ್ದು ನಿಲ್ಲುವುದಿಲ್ಲ.

ಕಂಚುಕಿ— ಮಹಾರಾಜರು ಅಪ್ಪಣೆ ಮಾಡಿದಂತೆ. (ಹೋಗಿ, ಬಂದು) ಮಹಾರಾಜರಿಗೆ ಜಯವಾಗಲಿ. ಇದೋ ಆ ಚಿತ್ರಪಟ.

ದುರ್ಯೋಧನ — ನನ್ನೆ ದುರಿಗೆ ಹರವು.

ಕಂಚುಕಿ — ಮಹಾರಾಜರ ಅಪ್ಪಣೆ. (ಹರಡುತ್ತಾನೆ)

ದುರ್ಯೋಧನ — ಆಹಾ ! ಈ ಚಿತ್ರಪಟವು ಎಷ್ಟು ಸೊಗಸಾಗಿದೆ ! ಈ ದುಃಶಾಸನನು ದ್ರೌಪದಿಯ ಮುಡಿ ಹಿಡಿದು ನಿಲ್ಲಿಸಿಕೊಂಡಿದ್ದಾನೆ. ಈ ದ್ರೌಪದಿಯಾದರೋ,

ತುಡುಕೆ ದುಶ್ಶಾಸನನು, ಕಳವಳಿಸಿ ಕಣ್ಣುಗಳ
ತೆರೆದಿಹಳು, ರಾಹುವಿನ ಬಾಯೊಳಗೆ ಬಿದ್ದಿರುವ
ಚಂದ್ರಲೇಖೆಯ ಹಾಗೆ ಶೋಭಿಸುವಳು. ॥ ೭ ॥

ಈ ದುರಾತ್ಮನಾದ ಭೀಮನು ಎಲ್ಲ ರಾಜರ ಎದುರಿನಲ್ಲಿ ಅವಮಾನ ಹೊಂದಿದ ದ್ರೌಪದಿಯನ್ನು ಕಂಡು ಕೋಪ ಕೆರಳಲು ಸಭಾ ಮಂಟಪದ ಕಂಬವನ್ನು ತೂಗಿ ನೋಡುತ್ತಿದ್ದಾನೆ. ಈ ಯುಧಿಷ್ಠಿರನು,

ಸತ್ಯ ದಯೆ ಧರ್ಮಗಳ ತಳೆದವನು, ಜೂಜಾಡಿ
ಸೋತು ಮತಿಗೆಟ್ಟಿಹನು ; ಕಡೆಗಣ್ಣ ನೋಟದಲಿ
ಭೀಮನಾ ಕೋಪವನು ಶಾಂತಗೊಳಿಸುತ್ತಲಿಹನು. ॥ ೮ ॥

ಗ ಈ ಅರ್ಜುನನು,

ರೋಷದಲಿ ಕಣ್ಣುಗಳು ಕೆರಳಿರಲು, ಅಧರೋಷ್ಠ
ವಲುಗುತಿರೆ, ಆ ವೈರಿ ಮಂಡಲವ ಹುಲ್ಲಿಗೆಣೆ
ಯೆನೆ ಬಗೆದು, ರಾಜರೆಲ್ಲರನೊರಸಿ ತೂರುವೊಲು
ಗಾಂಡಿವದ ಹೆದೆಯನಿದೊ ಮೆಲ್ಲನೆಳೆಯುತ್ತಲಿಹನು. ॥ ೯ ॥

ಈ ಯುಧಿಷ್ಠಿರನು ಅರ್ಜುನನ್ನು ತಡೆಯುತ್ತಿದ್ದಾನೆ. ಈ ನಕುಲ ಸಹದೇವರಿಬ್ಬರೂ

ನಡುಕಟ್ಟಿ ನೆರೆ ಬಿಗಿದು, ಕೂರಸಿಯ ಹಿಡಿಯೊಳಗೆ
ಕೈಯಿಟ್ಟು, ಹಲ್ಲು ಮುಡಿಯನು ಕಚ್ಚಿ, ಮುಖರಾಗ
ಕೆಂಪೇರೆ, ಮರಣಭಯವನು ತೊರೆದು ತವಕಿಸುತ

ನನ್ನ ತಮ್ಮನ ತಡೆಯೆ ನೋಡುವರು; ಸಿಂಹವನು
ಕಾಡ ಮರಿಜಿಂಕೆಗಳು ತಡೆವಂತೆ ತಡೆಯುತಿಹರು ॥೧೦॥

ಈ ಯುಧಿಷ್ಠಿರನು ಕುಮಾರರ ಸಮೀಪಕ್ಕೆ ಹೋಗಿ,
"ನಾನೆ ನೀಚನು, ಬುದ್ಧಿ ವಿಪರೀತವಾದವನು.
ಎಂತಾದರೂ ಮಾಡಿ ರೋಷವನು ಬಿಡಿರಿಂದು.
ಸಲೆ ನಯಾನಯಗಳನು ಬಲ್ಲವರು ನೀವು.
ಅವಮಾನದಧಿಕಾರ ಜೂಜಿಂದ ಬಂದಿಹುದು.
ಅದನಿಂದು ಸಹಿಸದಿರೆ ಸತ್ವವಂತರು ಕಂಡು
ನಮ್ಮಾ ಪರಾಕ್ರಮವ ನಿಂದಿಸದೆ ಬಿಡರು". ॥೧೧॥

ಎಂದು ಹೇಳಿ ಹಿಂದಿರುಗಿಸುತ್ತಿದ್ದಾನೆ. ಈ ಗಾಂಧಾರ ರಾಜನು,
ದಾಳಗಳ ಮೋಸದಿಂದೆಸೆಯುತ್ತ, ಗರ್ವದಲಿ
ಗಹಗಹಿಸಿ ನಗುತಿಹನು. ತನ್ನ ಕೀರ್ತಿಯ ಮೆರೆದು
ಶತ್ರುಗಳ ಸಂತಸವ ಕುಗ್ಗಿಸುವನಂತಿಹನು.
ಪೀಠದಲಿ ಮನವೊಪ್ಪಿದಂದದಲಿ ಮಂಡಿಸುತ
ಗೋಳಿಡುವ ದ್ರೌಪದಿಯ ಕುಡಿನೋಟದಲಿ ನೋಡಿ,
ಈ ನಯಜ್ಞನು, ನೆಲದಲೇನನೋ ಬರೆಯುತಿಹನು. ॥೧೨॥

ಈ ಆಚಾರ್ಯ ಪಿತಾಮಹರಿಬ್ಬರೂ ಆ ದ್ರೌಪದಿಯನ್ನು ನೋಡಿ ಲಜ್ಜೆಯಿಂದ ಮುಖಕ್ಕೆ ಮುಸುಕು ಹಾಕಿಕೊಂಡು ಕುಳಿತಿರುವರು. ಆಹಾ ಇದರ ಬಣ್ಣ ಎಷ್ಟು ತುಂಬಿಕೊಂಡಿದೆ! ಭಾವ ಎಷ್ಟು ಚೆನ್ನಾಗಿ ಹೊರಸೂಸುತ್ತಿದೆ! ಯುಕ್ತವಾದದ್ದನ್ನೆಲ್ಲ ಅಲ್ಲಲ್ಲಿಗೆ ಹೊಂದುವಂತೆ ಬರೆದಿರುವುದು ಎಷ್ಟು ಸೊಗಸಾಗಿದೆ! ಈ ಚಿತ್ರ ಪಟವನ್ನು ಬಹು ಸ್ಪಷ್ಟವಾಗಿ ಬರೆದಿದೆ. ನೋಡಿ ನನಗೆ ಸಂತೋಷವಾಯಿತು ಯಾರಲ್ಲಿ?

ಕಂಚುಕಿ — ಮಹಾರಾಜರಿಗೆ ಜಯವಾಗಲಿ.

ದುರ್ಯೋಧನ — ಬಾದರಾಯಣ, ಹಕ್ಕಿ ವಾಹನವಾಗಿರುವ ಮಾತ್ರಕ್ಕೇ ಮೈಮರೆತಿರುವ ಆ ದೂತನನ್ನು ಕರೆದುಕೊಂಡು ಬಾ.

ಕಂಚುಕಿ — ಮಹಾರಾಜರು ಆಜ್ಞೆಮಾಡಿದಂತಾಗಲಿ. (ಹೋಗುತ್ತಾನೆ)

ದುರ್ಯೋಧನ — ವಯಸ್ಯ ಕರ್ಣ,

ಆ ಕೃಷ್ಣ, ಕೃಷ್ಣಮತಿ, ಪಾಂಡವರ ನುಡಿಯಿಂದ
ದೂತ ಕಾರ್ಯಕ್ಕಾಗಿ ಭೃತ್ಯನೊಲು ಬಂದಿಹನು.
ಸಜ್ಜುಗೊಳಿಸಿಕೊ ಕರ್ಣ, ಕಿವಿಗಳ; ಯುಧಿಷ್ಠಿರನ
ಹೆಂಗರುಳ ಮೃದುನುಡಿಯನಾಲಿಸುವೆಯಂತೆ. ॥ ೧೩ ॥

(ಬಳಿಕ ವಾಸುದೇವನೂ ಕಂಚುಕಿಯೂ ಪ್ರವೇಶಿಸುತ್ತಾರೆ)

ವಾಸುದೇವ — ಈಗಲಾದರೋ, ಧರ್ಮರಾಜನ ಮಾತಿನಿಂದಲೂ ಧನಂಜಯನ ಅಕೃತ್ರಿಮವಾದ ಸ್ನೇಹದಿಂದಲೂ ಪ್ರೇರಿತನಾಗಿ ಯುದ್ಧ ದರ್ಪದಿಂದ ಕೊಬ್ಬಿ ಹೇಳಿದ್ದನ್ನು ಕೇಳದಿರುವ ಸುಯೋಧನನೊಡನೆ ನನಗೆ ಅನುಚಿತವಾಗಿರುವುದಾದರೂ ಈ ದೂತಕಾರ್ಯವನ್ನು ನಿರ್ವಹಿಸುತ್ತಿದ್ದೇನೆ. ಆದರೆ,

ರಿಪುಸೈನ್ಯದಾನೆಗಳ ಕುಂಭಗಳನೊಡೆದೊಡೆದು
ಕೆಡಹುವ ಮಹಾಗದೆಯ ತಾಳ್ದ ಭೀಮನ ಕೋಪ
ದುರಿಯಿಂದ — ದ್ರೌಪದಿಯ ಭಂಗದಿಂದುದಿಸಿದಾ
ಉರಿಯಿಂದ — ಅರ್ಜುನನ ಬಾಣಗಳ ಬಿರುಗಾಳಿ
ನೆರವಾಗೆ, ಕುರುವಂಶವನ ಬೆಂದು ಬೂದಿಯಾಯ್ತು. ॥ ೧೪ ॥

ಇದು ಸುಯೋಧನನ ಶಿಬಿರ. ಇಲ್ಲಿ,

ಸುರಪುರಕೆ ಸಮವೆನಿಪ ರಾಜರಾವಾಸಗಳು
ಅವರವರಭೀಷ್ಟಗಳನನುಸರಿಸಿ ಸಮೆದಿಹವು.
ವಿಸ್ತೀರ್ಣವಾಗಿರುವ ಶಸ್ತ್ರಶಾಲೆಗಳೊಳಗೆ
ಬಗೆ ಬಗೆಯ ಶಸ್ತ್ರಾಸ್ತ್ರ ಸಾಧನಗಳೊಟ್ಟಿಹವು.
ಲಾಯದಲಿ ಕುದುರೆಗಳು ಕೆನೆಯುತಿಹವಾನೆಗಳು
ಘೀಳಿಟ್ಟು ಮೊರೆಯುತಿಹವೈಶ್ವರ್ಯ ತುಂಬಿಹುದು.
ಸ್ವಜನ ಪರಿಭವದಿಂದ, ಈ ತುಂಬಿದೈಶ್ವರ್ಯ
ವೆಲ್ಲಕೂ ನಾಶವೇ ಕಾದಿರುವುದು ॥ ೧೫ ॥

ಅಯ್ಯಾ,

ದುಷ್ಟವಾದಿಯು, ಗುಣವ ಹಗೆಗೊಳ್ಳುವನು, ಶಠನು,
ಸ್ವಜನ ನಿರ್ದಯನಾ ಸುಯೋಧನನು — ಇಂಥವನು
ತಾನೆನ್ನ ಕಂಡರೂ ಮಾಡಬೇಕಾದುದನು
ಮಾಡುವುದೆ ಇಲ್ಲವವನು ! ॥ ೧೬ ॥

ಅಯ್ಯಾ ಬಾದರಾಯಣ, ಒಳಗೆ ಹೋಗಬಹುದೋ ?

ಕಂಚುಕಿ — ಅಡ್ಡಿಯೇನು, ಅಡ್ಡಿಯೇನು ? ಪದ್ಮನಾಭನು ಒಳಕ್ಕೆ ದಯಮಾಡಬಹುದು.

ವಾಸುದೇವ — (ಪ್ರವೇಶಿಸಿ) ಏನು ಏನು, ನನ್ನನ್ನು ನೋಡಿ ಕ್ಷತ್ರಿಯರೆಲ್ಲರೂ ಗಾಬರಿಗೊಂಡಿರುವರಲ್ಲಾ ! ಬೇಡ ಬೇಡ, ಗಾಬರಿ ಬೇಡ. ತಾವೆಲ್ಲರೂ ಧಾರಾಳವಾಗಿ ಕುಳ್ಳಿರಬಹುದು.

ದುರ್ಯೋಧನ — ಏನು, ಏನು, ಕೇಶವನನ್ನು ಕಂಡು ಕ್ಷತ್ರಿಯರೆಲ್ಲರೂ ಗಾಬರಿಗೊಂಡರೆ ? ಸಾಕು ಸಾಕು, ನಿಮ್ಮ ಸಂಭ್ರಮ ! ಮೊದಲು ವಿಧಿಸಿದ ದಂಡವು ನೆನಪಿರಲಿ. ನಾನಲ್ಲವೇ ಆಜ್ಞೆಮಾಡುತ್ತಿರುವವನು !

ವಾಸುದೇವ — ಏನಯ್ಯಾ ಸುಯೋಧನ, ಕುಳಿತುಕೊಂಡೆ ?

ದುರ್ಯೋಧನ — (ಆಸನದಿಂದ ಬಿದ್ದು, ತನ್ನಲ್ಲಿ ತಾನೆ) ಕೇಶವನು ಬಂದುಬಿಟ್ಟನೆಂಬುದು ಚೆನ್ನಾಗಿ ವ್ಯಕ್ತವಾಯಿತು.

ಉತ್ಸಾಹದಿಂದೆನ್ನ ಬುದ್ಧಿಯನು ನೆಲೆಗೊಳಿಸಿ
ಕುಳಿತಿದ್ದೆನಾದರೂ ಕೇಶವನ ಮಹಿಮೆಯಿಂ
ದಾಸನದ ಮೇಲಿಂದ ಕೆಳಗುರುಳಿ ಬಿದ್ದೆನಿಂದು. ॥ ೧೭ ॥

ಅಬ್ಬಾ, ಈ ದೂತನು ಬಹಳ ಮಾಯಾವಿ. (ಪ್ರಕಾಶವಾಗಿ) ಅಯ್ಯಾ ದೂತ, ಈ ಆಸನದಲ್ಲಿ ಕುಳಿತುಕೊ.

ವಾಸುದೇವ — ಆಚಾರ್ಯ, ಕುಳಿತುಕೊಳ್ಳಬೇಕು. ಗಾಂಗೇಯ ಪ್ರಮುಖರಾದ ಎಲೈ ರಾಜರೇ, ನೀವೆಲ್ಲರೂ ಧಾರಾಳವಾಗಿ ಕುಳಿತುಕೊಳ್ಳ

ಬಹುದು. ನಾವೂ ಕುಳಿತುಕೊಳ್ಳುತ್ತೇವೆ. (ಕುಳಿತುಕೊಂಡು) ಆಹಾ, ಈ ಚಿತ್ರಪಟವು ಎಷ್ಟು ಸೊಗಸಾಗಿದೆ! ಏನಿದು? ಇದರಲ್ಲಿ ದ್ರೌಪದಿಯ ಮುಡಿಯನ್ನು ಹಿಡಿದೆಳೆದದ್ದನ್ನು ಚಿತ್ರಿಸಿದೆ! ಅಹಹಾ!

ಈ ಸುಯೋಧನನಿಂದು ತಿಳಿವಳಿಕೆ ಸಾಲದಿರೆ
ಸ್ವಜನಾಪಮಾನವನೆ ನೆರೆ ಪರಾಕ್ರಮವೆಂದು
ತಿಳಿಯುವನು. ಯಾರಿಹರು ಲೋಕದಲಿ, ಸಭೆಗಳಲಿ
ತಮ್ಮ ದೋಷವ ತಾವೆ ಬೆದಕಿ ತೋರುವರು? ॥ ೧೮ ॥

ಆಃ, ಈ ಚಿತ್ರಪಟವನ್ನು ಇಲ್ಲಿಂದ ತೆಗೆದಿರಿಸಿರಿ.

ದುರ್ಯೋಧನ — ಬಾದರಾಯಣ, ಚಿತ್ರಪಟವನ್ನು ತೆಗೆದಿರಿಸು.

ಕಂಚುಕಿ — ಮಹಾರಾಜರು ಅಪ್ಪಣೆಮಾಡಿದಂತೆ. (ತೆಗೆದಿರಿಸುತ್ತಾನೆ)

ದುರ್ಯೋಧನ — ಅಯ್ಯಾ ದೂತ,

ಧರ್ಮಾತ್ಮಜನು, ವಾಯುಸುತನಾದ ಭೀಮನಾ
ತ್ರಿದಶೇಂದ್ರಸೂನುವೆನ್ನಯ ತಮ್ಮನರ್ಜುನನು,
ಅಶ್ವಿಸುತರು, ವಿನೀತರಾ ಯಮಳರ್ — ಇವರೆಲ್ಲ
ಭೃತ್ಯಗಣದೊಡಗೂಡಿ ಕುಶಲಿಗಳೆ ಹೇಳು. ॥ ೧೯ ॥

ವಾಸುದೇವ — ಇದು ಗಾಂಧಾರೀಪುತ್ರನಿಗೆ ತಕ್ಕಂತಿರುವುದು. ಹೌದು, ಹೌದು. ಎಲ್ಲರೂ ಕುಶಲಿಗಳು. ನಿನ್ನ ರಾಜ್ಯಕ್ಕೂ ಶರೀರಕ್ಕೂ ಒಳಗೂ ಹೊರಗೂ ಕುಶಲವನ್ನೂ ಅನಾಮಯವನ್ನೂ ಕೇಳಿ ಯುಧಿಷ್ಠಿರನೇ ಮೊದಲಾದ ಪಾಂಡವರು :

"ಬಹುದುಃಖಪಟ್ಟಿಹೆವು, ಸಮಯವದು ಮುಗಿದಿಹುದು,
ಧರ್ಮಸಮ್ಮತವಾಗಿ ನಮಗೆ ಬರಬೇಕಾದ
ದಾಯಾದ್ಯವೇನುಂಟೊ, ಅದ ಹಂಚಿಕೊಡುವುದಿಂದು." ॥ ೨೦ ॥

ಎಂದು ವಿಜ್ಞಾಪಿಸುತ್ತಾರೆ.

ದುರ್ಯೋಧನ — ಏನು, ಏನು? ದಾಯಾದ್ಯವನ್ನೋ?

ಕಾಡಿನಲಿ, ಚಿಕ್ಕಪ್ಪ, ಬೇಟೆಯಾಡುತಲಿರಲು

ತಪ್ಪೆಸಗಿ ಮುನಿಯ ಶಾಪಕೆ ತಾನು ಸಿಲ್ಕಿದನು.
ಅಂದಿನಿಂದಲು ತನ್ನ ಹೆಂಡಿರನು ತೊರೆದವನು
ಹೆರರ ಮಕ್ಕಳಿಗೆಂತು ತಂದೆಯಾಗುವನು? ॥ ೨೧ ॥

ವಾಸುದೇವ— ಹಿಂದಿನ ಚರಿತ್ರೆಯನ್ನು ಬಲ್ಲ ನಿನ್ನನ್ನು ಒಂದು ಮಾತು ಕೇಳುತ್ತೇನೆ.

ವಿಷಯಲಂಪಟನಾಗಿ ಕ್ಷಯರೋಗದಿಂದಾ ವಿ
ಚಿತ್ರವೀರ್ಯನು ಮಡಿಯಲಂಬಿಕೆಯ ಬಸುರಿನಲಿ
ವ್ಯಾಸನಿಂದುದಿಸಿದನು ಧೃತರಾಷ್ಟ್ರನೀ ನಿನ್ನ
ತಂದೆಗೆಂತೀ ರಾಜ್ಯ ದೊರಕುವುದು ಹೇಳು. ॥ ೨೨ ॥

ಬೇಡ ಬೇಡ,

ಇಂತೊಬ್ಬರೊಬ್ಬರ ವಿರೋಧವನು ಹೆಚ್ಚಿಸಲು
ನೃಪ, ಬೇಗ ಕುರುಕುಲವು ಮುರಿದು ಹೆಸರೊಂದುಳಿವು
ದದರಿಂದ ರೋಷವನು ತೆಗೆದೊಗೆದು, ಪಾಂಡವರು
ಪ್ರೇಮದಿಂದೊರೆವುದನು ನಡೆಸುವುದೆ ಹಿತವು. ॥ ೨೩ ॥

ದುರ್ಯೋಧನ— ಎಲಾ, ದೂತ! ನಿನಗೆ ರಾಜ್ಯವ್ಯವಹಾರ ತಿಳಿಯದು.

ರಾಜ್ಯವೆಂಬುದು, ಕೇಳು, ಶತ್ರುಗಳ ಸದೆಬಡಿದು
ಗೆದ್ದರಸುಮಕ್ಕಳಿಗೆ— ಶೂರರಿಗೆ ದಕ್ಕುವುದು.
ಬೇಡಿದರೆ ದೊರೆಯದದು ; ದೀನರಿಗೆ ಕೊಡಲರಿದು.
ದೊರೆತನವ ಪಡೆವಾಸೆಯಿರೆ ಬೇಗ ಸಾಹಸವ
ತೋರಿಸಲಿ. ಒಲ್ಲದಿರೆ ತಳುವದೆಯೆ ಶಮಕಾಗಿ
ಶಾಂತಾತ್ಮರೊಪ್ಪುವಾಶ್ರಮದೆಡೆಗೆ ನಡೆಯಲವರು. ॥ ೨೪ ॥

ವಾಸುದೇವ— ಅಯ್ಯಾ ಸುಯೋಧನ, ಬಂಧುಜನರ ವಿಷಯದಲ್ಲಿ ಕಠಿನವಾಗಿ ಮಾತಾಡಬಾರದು.

ಪುಣ್ಯಸಂಚಯದಿಂದ ದೊರೆತನದ ಸಿರಿಯು ಕೈ
ಸೇರಿರಲು, ಬಂಧು ಮಿತ್ರರನಾರು ವಂಚಿಪರೊ,
ಅವರ ಶ್ರಮವೆಲ್ಲವೂ ವಿಫಲವಾಗುವುದು. ॥ ೨೫ ॥

ದುರ್ಯೋಧನ - ನಿಮ್ಮ ತಂದೆಯ ಭಾವ, ರಾಜ, ಕಂಸನ ಮೇಲೆ
ನಿನಗೆ ದಯೆಯಿಲ್ಲವೇನೆ, ನಮಗೆಂತು ಬಲಿಯುವುದು
ನಿತ್ಯಾಪಕಾರಿಗಳ ಮೇಲನಿತು ದಯೆಯು ? ॥ ೨೬ ॥

ವಾಸುದೇವ — ಅದನ್ನು ನನ್ನಲ್ಲಿ ದೋಷವೆಂದು ಭಾವಿಸಬೇಡ
ಮಕ್ಕಳನು ಕೊಂದೆನ್ನ ತಾಯ ಬಲುಗೋಳಿಡಿಸಿ,
ತನ್ನ ಮುದಿ ತಂದೆಯನೆ ಸೆರೆಯಿಡಿಸಿ ಪೀಡಿಸಲು,
ಮೃತ್ಯುವೇ ಬಂದಿಡಿಯೆ ಮಡಿದನವನು. ॥ ೨೭ ॥

ದುರ್ಯೋಧನ — ಕಂಸನು ಖಂಡಿತವಾಗಿಯೂ ನಿನ್ನಿಂದ ವಂಚಿತನಾದನು ನಿನ್ನನ್ನು ನೀನೇ ಹೊಗಳಿಕೊಳ್ಳುವುದನ್ನು ಸಾಕುಮಾಡು. ಇದೇನು ಪರಾಕ್ರಮವಲ್ಲ. ನೋಡು,

ಅಳಿಯನಳಿವಿನ ಶೋಕ ಸುಡುತಿರಲು, ಮಗಧೇಶ
ರೋಷದಲಿ ಘುಡುಘುಡಿಸೆ ನಡುಗುತೋಡಿದೆ ನೀನು.
ಈ ನಿನ್ನ ಶೌರ್ಯವದು ಎಲ್ಲಿ ಹೋಗಿದ್ದುದಂದು ? ॥ ೨೮ ॥

ವಾಸುದೇವ — ಅಯ್ಯಾ ಸುಯೋಧನ, ನಯಾನುಗಾಮಿಗಳು ದೇಶ ಕಾಲಾವಸ್ಥೆಗಳನ್ನು ನೋಡಿತಾನೇ ಶೌರ್ಯವನ್ನು ತೋರಿಸುವುದು ! ನನ್ನ ವಿಷಯವಾದ ಪರಿಹಾಸವು ಇಲ್ಲಿ ನಿಲ್ಲಲಿ. ಇನ್ನು ನಿನ್ನ ಕಾರ್ಯವನ್ನು ನಿರ್ವಹಿಸು.

ಸೋದರರ ಕೆಳೆಗೊಂಡು ದೋಷಗಳ ಮರೆತುಬಿಡು.
ಬಂಧುಗಳ ಸಂಬಂಧ ಲೇಸೆರಡು ಲೋಕಗಳಿಗೂ. ॥ ೨೯ ॥

ದುರ್ಯೋಧನ — ದೇವಸುತರಿಗೆ ನರರ ಬಾಂಧವ್ಯವೆಂತಹುದು ?
ಪಿಷ್ಟಪೇಷಣವೇಕೆ ? ನಿಲ್ಲಿಸೀ ಕಥೆಯನಿನ್ನು. ॥ ೩೦ ॥

ವಾಸುದೇವ — (ತನ್ನಲ್ಲಿ ತಾನು)

ಸಾಮದಲಿ ಬೋಧಿಸಲು ಬಿಡನಾ ಸ್ವಭಾವವನು.
ಬಿರುನುಡಿಗಳಿಂದಿವನ ಕಲಕಿ ನೋಡುವೆನು. ॥ ೩೧ ॥

(ಪ್ರಕಾಶವಾಗಿ) ಅಯ್ಯಾ ಸುಯೋಧನ, ಅರ್ಜುನನ ಬಲ ಪರಾಕ್ರಮವನ್ನು ನೀನು ತಿಳಿದಿಲ್ಲವೆ ?

ದುರ್ಯೋಧನ - ತಿಳಿದಿಲ್ಲ.

ವಾಸುದೇವ — ಹಾಗಾದರೆ ಕೇಳು.

ಪಶುಪತಿ ಕಿರಾತರೂಪಾಂತಂದು ಯುದ್ಧದಲಿ
ಸಂತೋಷಪಡಿಸಿದನು ಅಗ್ನಿ ಖಾಂಡವ ವನವ
ಸುಡುವಂದು ಬಿರುಮಳೆಯ ಬಾಣದಲಿ ಮುಚ್ಚಿದನು
ಸುರಪತಿಯು ಛಲಿಸಿದ ನಿವಾತಕವಚರನೆಲ್ಲ
ಲೀಲೆಯಲಿ ನಿರ್ನಾಮಮಾಡಿದನು. ಕೇಳಂದು,—
ಆ ವಿರಾಟನ ಮನೆಯಲಿದ್ದಂದು — ಮಾರಾಂತ
ಭೀಷ್ಮಾದಿಗಳನೆಲ್ಲ ಒಬ್ಬನೇ ಗೆದ್ದನವನು. ॥ ೩೨ ॥

ಇದರ ಜೊತೆಗೆ ನಿನಗೂ ಪ್ರತ್ಯಕ್ಷವಾದ ಮತ್ತೊಂದು ಸಂಗತಿಯನ್ನು ಹೇಳುತ್ತೇನೆ.

ಘೋಷಯಾತ್ರೆಯಲಂದು ಚಿತ್ರಸೇನನು ನಿನ್ನ
ಗಗನಕ್ಕೆ ಕೊಂಡುಯ್ಯೆ, ನಿನ್ನ ಗೋಳನು ಕೇಳಿ
ಫಲ್ಗುನನೆ ತಾ ಬಂದು ನಿನ್ನ ಬಿಡಿಸಿದನಲ್ಲವೆ? ॥ ೩೩ ॥

ಹೆಚ್ಚು ಮಾತಿನಿಂದೇನು ?

ಧೃತರಾಷ್ಟ್ರಸುತ ನನ್ನ ಮಾತುಗಳ ಕೇಳರ್ಧ
ರಾಜ್ಯವನು ಕೊಡು ಕೊಡೆಯೊ, ಸಾಗರದವರೆಗಿನಾ
ಧರಣಿಯನು ಪಾಂಡವರೆ ಸೆಳೆದುಕೊಳ್ಳುವರು. ॥ ೩೪ ॥

ದುರ್ಯೋಧನ — ಏನು, ಏನು ? ಪಾಂಡವರೇ ಸೆಳೆದುಕೊಳ್ಳುವರೋ ?

ಕದನದಲಿ ಕಾದುತ್ತ ಭೀಮರೂಪವನಾಂತು
ಮಾರುತನೆ ಪ್ರಹರಿಸಲಿ, ಪಾರ್ಥರೂಪವನಾಂತು
ಶಕ್ರನೇ ಪ್ರಹರಿಸಲಿ, ಪರುಷವಚನದ ಶೂರ,
ನಿನ್ನ ನುಡಿಗಳ ಕೇಳಿ ಹುಲ್ಲೆಸಳನೂ ಕೊಡೆನು—
ತಂದೆಯನುಭವಿಸಿರುವ, ಬಲುಬಲದ ಕಾಪಿರುವ
ಈ ಸ್ವರಾಜ್ಯದಲೊಂದು ತೃಣವನೂ ಕೊಡೆನು ನಾನು. ॥ ೩೫ ॥

ವಾಸುದೇವ — ಕುರುಕುಲಕಲಂಕಭೂತ, ಅಯಶೋಲುಬ್ಧ, ನಾವು ಹುಲ್ಲನ್ನು ನಡುವೆ ಇಟ್ಟು ಮಾತಾಡಿಸುವಷ್ಟು ನೀಚರಾದೆವೋ ?

ದುರ್ಯೋಧನ — ಎಲಾ ದನಕಾಯುವವನೇ, ನೀನು ಹುಲ್ಲನ್ನು ನಡುವೆ ಇಟ್ಟು ಮಾತಾಡಿಸುವಷ್ಟು ನೀಚನೇ ಸರಿ.

ಕೊಲ್ಲಬಾರದ ಹೆಣ್ಣು ಕೊಂದು, ಹಯ ವೃಷಭಗಳ,
ಜಟ್ಟಿಗಳ ಸದೆಬಡಿದು, ಲಜ್ಜೆಯಿಲ್ಲದೆ ಬಂದು
ಸಾಧುಗಳ ಬಳಿಯೆಂತು ನುಡಿಯಲಿಚ್ಛಿಸುವೆ ನೀನು ? ॥ ೩೬ ॥

ವಾಸುದೇವ — ಅಯ್ಯಾ ಸುಯೋಧನ, ನನ್ನನ್ನು ನಿಂದಿಸುವೆಯಾ ?

ದುರ್ಯೋಧನ — ಆಃ, ನೀನು ಸಂಭಾಷಣೆಗೇ ಯೋಗ್ಯನಲ್ಲ.

ಮೇಲೆತ್ತಿ ಹಿಡಿಸಿರುವ ಬೆಳ್ಗೊಡೆಯ ತಳೆದಿಹೆನು.
ದ್ವಿಜರ ಕೈನೀರಿನಭಿಷೇಕದಲಿ ನೆತ್ತಿಯನು
ನೆನೆಸಿಹೆನು. ತಲೆಬಾಗಿ ಬರುವ ನೃಪಮಂಡಲದ
ಸಂಗಡವೆ ಕಲಿತು ಮಾತಾಡುವೆನು.
ನಿನ್ನಂಥವರ ಕೂಡೆ ಮಾತಾಡೆನು. ॥ ೩೭ ॥

ವಾಸುದೇವ — ಸುಯೋಧನನು ನನ್ನೊಡನೆ ಮಾತಾಡುವುದಿಲ್ಲವಲ್ಲವೆ !

ಎಲವೊ ಶಠ, ಬಂಧುಜನ ನಿಃಸ್ನೇಹ, ಕಾಕ, ಕೇಕರ, ಪಿಂಗಲ,
ನಿನ್ನಿಂದಲೀವಂಶ—ಕುರುವಂಶವಿದು, ಬೇಗನಳಿಯುವುದು
ಕೇಳು ॥ ೩೮ ॥

ಎಲೆ ಎಲೈ ರಾಜರಿರಾ, ಇಗೋ ನಾವು ಹೋಗುತ್ತೇವೆ.

ದುರ್ಯೋಧನ — ಏನು, ಕೇಶವನು ಹೋಗುತ್ತಾನಂತೋ ? ದುಶ್ಯಾಸನ, ದುರ್ಮರ್ಷಣ, ದುರ್ಮುಖ, ದುರ್ಬುದ್ಧಿ, ದುಷ್ಟೇಶ್ವರ, ದೂತ ಸಮುದಾಚಾರವನ್ನು ಮೀರಿರುವ ಕೇಶವನನ್ನು ಕಟ್ಟಿಬಿಡಿ. ಏನು, ನಿಮಗೆ ಶಕ್ತಿಯಿಲ್ಲವೆ ? ದುಶ್ಯಾಸನ, ನೀನು ಸಮರ್ಥನಾಗಿರುವೆಯಲ್ಲವೆ ?

ಕರಿತುರಗಗಳ ಕೊಂದು ಕಂಸನನು ಕೊಂದವನು,
ಗೋಕುಲದಿ ಬೆಳೆದು ತಾ ಭೃತ್ಯಧರ್ಮವನರಿಯು

ನಾ ಕೃಷ್ಣನಿಂದಿಲ್ಲಿ ಪಾರ್ಥಿವರ ಮುಂದುಗಡೆ
ಭುಜಬಲಪರಾಕ್ರಮಗಳುಡುಗಿರಲು ತಪ್ಪಾದಿ
ದೋಷಿಯಾದನು. ಬೇಗ ಬಂಧಿಸುವುದಿವನ. ‖ ೩೯ ‖

ಇವನಿಗೆ ಸಾಗದು. ಮಾವ, ಕೇಶವನನ್ನು ಕಟ್ಟಿಬಿಡು. ಏನು, ಹಿಮ್ಮೆಟ್ಟಿ ಬೀಳುತ್ತಿರುವನಲ್ಲಾ! ಆಗಲಿ, ನಾನೇ ಹಗ್ಗಗಳಿಂದ ಕಟ್ಟಿಹಾಕುತ್ತೇನೆ. (ಹತ್ತಿರಕ್ಕೆ ಹೋಗುತ್ತಾನೆ)

ವಾಸುದೇವ — ಏನು, ಸುಯೋಧನನು ನನ್ನನ್ನು ಕಟ್ಟಿಹಾಕಬೇಕೆಂದು ಬಯಸುವನಲ್ಲವೇ? ಆಗಲಿ, ಸುಯೋಧನನ ಸಾಮರ್ಥ್ಯವನ್ನು ನೋಡುತ್ತೇನೆ. (ವಿಶ್ವರೂಪವನ್ನು ಧರಿಸುತ್ತಾನೆ)

ದುರ್ಯೋಧನ — ಎಲಾ ದೂತ,

ದೇವಮಾಯೆಗಳೊಡನೆ ನಿನ್ನ ಮಾಯೆಯನೆಲ್ಲ
ಒಮ್ಮೆಯೇ ತೋರುತಿರು, ತಡೆಯಿಲ್ಲವೆನಿಸಿದಾ
ದೇವಾಸ್ತ್ರಗಳನೆಲ್ಲ ಹಿಡಿದು ನೀ ಹೊಡೆಯುತಿರು;
ಎತ್ತು ಕುದುರೆಯ ಕೊಂದ ದರ್ಪದಲಿ ಮೆರೆವವನ್ನೆ,
ದೊರೆಗಳೆದುರಿಗೆ ನಿನ್ನನೀಗಲೇ ಬಂಧಿಸುವೆನು. ‖ ೪೦ ‖

ಆಃ, ನಿಲ್ಲೀಗ. ಏನು, ಕೇಶವನು ಕಾಣಿಸನಲ್ಲಾ. ಇವನೇ ಕೇಶವನು. ಆಹಾ ಕೇಶವನು ಎಷ್ಟು ಕುಳ್ಳಾಗಿರುವನು! ಏನು, ಕೇಶವನು ಕಾಣಿಸನಲ್ಲಾ. ಇವನೇ ಕೇಶವನು. ಅಬ್ಬಾ, ಕೇಶವನು ಎಷ್ಟು ಎತ್ತರವಾಗಿರುವನು! ಏನು, ಕೇಶವನು ಕಾಣುವುದಿಲ್ಲವಲ್ಲಾ. ಇವನು ಕೇಶವನು. ಮಂತ್ರಶಾಲೆಯಲ್ಲಿ ಎಲ್ಲ ಕಡೆಯಲ್ಲಿಯೂ ಕೇಶವರೇ ಇರುವರು! ಈಗೇನು ಮಾಡಲಿ? ಆಗಲಿ, ತಿಳಿಯಿತು. ಎಲೆ ಎಲೈ ರಾಜರೇ, ನೀವು ಪ್ರತಿಯೊಬ್ಬರೂ ಒಬ್ಬೊಬ್ಬ ಕೇಶವನನ್ನು ಕಟ್ಟಿಬಿಡಿ. ಏನು, ತಮ್ಮನ್ನು ತಾವೇ ಹಗ್ಗಗಳಿಂದ ಬಿಗಿದುಕೊಂಡು ರಾಜರೆಲ್ಲರೂ ಬೀಳುತ್ತಿದ್ದಾರೆ! ಇರಲಿ! ಎಲಾ ಜಂಭಕ, ನೆನಪಿರಲಿ!

ನನ್ನ ಬಿಲ್ಲಿನ ಹೆದೆಯಿನೊಗೆದ ಬಾಣದ ಮಾಲೆ
ನೆಗೆದು ನಾಟಲು ನೋರಿ ಸುರಿವ ಕೆನ್ನೀರಿಂದ
ಮೈಯೆಲ್ಲ ರಂಜಿಸಲಿ. ಅಂತು ಶಿಬಿರಕೆ ತಂದ
ನಿನ್ನನಾ ಪಾಂಡವರು ಕಂಡು ಕಣ್ಣೀರ್ದುಂಬಿ
ನಿಟ್ಟುಸಿರಬಿಡುತಿರಲಿ. ಬಿಡುಬಿಡುತ ನೋಡುತಿರಲಿ. ॥ ೪೧ ॥

(ಹೊರಡುತ್ತಾನೆ)

ವಾಸುದೇವ — ಆಗಲಿ, ಪಾಂಡವರ ಕಾರ್ಯವನ್ನು ನಾನೇ ಸಾಧಿಸಿ ಬಿಡ ತ್ತೇನೆ. ಎಲೈ ಸುದರ್ಶನ, ಇತ್ತ ಬಾ.

(ಬಳಿಕ ಸುದರ್ಶನನು ಪ್ರವೇಶಿಸುತ್ತಾನೆ)

ಸುದರ್ಶನ — ಇಗೋ, ಬಂದಿರುವೆನು

ದಯೆಗೈದು ಭಗವಂತನಾಡಿದಾ ನುಡಿಗೇಳಿ,
ಸುತ್ತಿಬಹ ಮೋಡಗಳ ಗಡಣದಿಂದೊಡಗೂಡಿ
ನಾನೋಡಿ ಬಂದಿಹೆನು ಕಮಲಾಯತಾಕ್ಷ ತಾ
ನಾರಲೀಪರಿ ಕೋಪಗೊಂಡಿಹನೊ ? ನಾನಿಂದ
ದಾರ ತಲೆಯಲಿ ಮೊರೆಯುತೆರಗಬೇಕೋ ? ॥ ೪೨ ॥

ಭಗವಂತನಾದ ನಾರಾಯಣನು ಎಲ್ಲಿರಬಹುದು !

ಆವನ ಮೊದಲೇನೆಂಬುದರಿದು, ಚಿಂತಿಸಲಾತ
ನಿರವಿನಾ ನೆಲೆ ತೋರದಾವಾಗಲೂ ಲೋಕ
ರಕ್ಷಣೆಗೆ ತೊಡಗಿಹನು. ಸರ್ವ ಸಂಪದ್ಯುತನು.
ತಾನೊಬ್ಬನಾದರೂ ಬಹುರೂಪನಾಗಿಹನು.
ಶತ್ರುಬಲವನು ಬಿಡದೆ ಕಡಿದು ಕೆಡಹುವನು. ॥ ೪೩ ॥

(ನೋಡಿ) ಅಗೋ ಈ ಭಗವಂತನು ಹಸ್ತಿನಪುರದ ಬಾಗಿಲಿನಲ್ಲಿ ದೂತನಿಗೆ ತಕ್ಕ ರೀತಿಯಿಂದ ಬಂದು ನಿಂತಿರುವನು ನೀರೆಲ್ಲಿದೆ ? ನೀರೆಲ್ಲಿವೆ ? ಭಗವತಿ, ಆಕಾಶಗಂಗೇ, ಸ್ವಲ್ಪ ನೀರು ಕೊಡು. ಅಗೋ ಸುರಿಯುತ್ತಿದೆ. (ಆಚಮನಮಾಡಿ, ಹತ್ತಿರ ಹೋಗಿ) ಭಗವಂತ ನಾದ ನಾರಾಯಣನಿಗೆ ಜಯವಾಗಲಿ. (ನಮಸ್ಕರಿಸುತ್ತಾನೆ)

ವಾಸುದೇವ — ಸುದರ್ಶನ, ಎದುರಿಲ್ಲದ ಪರಾಕ್ರಮವುಳ್ಳವನಾಗು.

ಸುದರ್ಶನ — ಅನುಗೃಹೀತನಾದೆ.

ವಾಸುದೇವ — ನೀನು ಒಳ್ಳೆಯ ಕೆಲಸದ ಕಾಲದಲ್ಲಿಯೇ ಬಂದ ಹಾಗಾಯಿತು.

ಸುದರ್ಶನ — ಏನು, ಏನು, ಕೆಲಸದ ಕಾಲವೆಂದಿರಲ್ಲವೆ? ಆಜ್ಞೆಮಾಡಬೇಕು, ಭಗವಂತನು ಆಜ್ಞೆಮಾಡಬೇಕು.

ಮೇರು ಮಂದರಕುಲವ ಗಿರಗಿರನೆ ತಿರುಗಿಸಲೋ?
ಅಲ್ಲದಿರೆ ಸಾಗರವನೆಲ್ಲ ಸಂಕ್ಷೋಭಿಸಲೊ?
ನಕ್ಷತ್ರವಂಶವನು ಭೂಮಿಯಲಿ ಬೀಳಿಸಲೊ?
ನಿನ್ನ ದಯೆಯಿಂದೆನಗೆ ಶಕ್ಯವಲ್ಲದುದಿಲ್ಲ.
ಏನಮಾಡಲಿ, ದೇವ? ನೇಮಿಸೆನಗೆ || ೪೪ ||

ವಾಸುದೇವ — ಎಲೈ ಸುದರ್ಶನ, ಇತ್ತ ಬಾ. ಎಲಾ ಸುಯೋಧನ,
ಲವಣಜಲದಲಿ ಮುಳುಗು, ಗಿರಿಯ ಗುಹೆಗಳಲಡಗು,
ಗ್ರಹಗಣವು ಸುತ್ತಿಬಹ ವಾಯುಮಾರ್ಗವನಡರು,
ಈ ಚಕ್ರದಿಂದ ನಿನಗುಳಿವಿಲ್ಲವಿಂದು.
ನನ್ನ ಭುಜಬಲದಿಂದ ಮಿಗಿಲು ವೇಗವನಾಂತು
ನುಗ್ಗಿ ಬಂದೆರಗುವುದು. ಎಲೆ ಚಪಲ, ಚಕ್ರವಿದು
ಕಾಲಚಕ್ರವೆ ಆಗಿ ಬಂದೆರಗದಿರದು. || ೪೫ ||

ಸುದರ್ಶನ —ಎಲಾ, ಸುಯೋಧನಹತಕ (ಎಂದು ಮತ್ತೆ ವಿಚಾರಮಾಡಿ), ಪ್ರಸನ್ನನಾಗಬೇಕು, ಭಗವಂತನಾದ ನಾರಾಯಣನು ಪ್ರಸನ್ನನಾಗಬೇಕು. ಎಲೆ ದೇವ,

ಧರೆಯ ಭಾರವನಿಳುಹಲವತರಿಸಿ ಬಂದಿರುವೆ.
ಈ ಸುಯೋಧನನಿಂತು ಮಡಿಯಲಾ ಶ್ರಮವೆಲ್ಲ
ವಿಫಲವಾಗುವುದಲ್ಲವೇ? || ೪೬ ||

ವಾಸುದೇವ — ಸುದರ್ಶನ, ರೋಷದಿಂದ ಸಮುದಾಚಾರವನ್ನು ನೋಡಲಿಲ್ಲ. ಇನ್ನು ನಿನ್ನ ಸ್ಥಳಕ್ಕೇ ಹೊರಟುಹೋಗು.

ಸುದರ್ಶನ— ಭಗವಂತನಾದ ನಾರಾಯಣನು ಆಜ್ಞೆ ಮಾಡಿದಂತಾಗಲಿ. ಏನು, ಏನು, ಗೋಪಾಲಕನೆಂದಿರಾ? ಈ ಸ್ವಾಮಿಯು ಮೂರು ಲೋಕಗಳನ್ನೂ ಮೂರು ಹೆಜ್ಜೆಗಳಿಂದ ಮುಚ್ಚಿದ ನಾರಾಯಣ ನಲ್ಲವೇ? ನೀವೆಲ್ಲರೂ ಶರಣಾಗತರಾಗಿ. ನಾನಿನ್ನು ಹೋಗು ತ್ತೇನೆ. ಅಗೋ, ಭಗವಂತನ ಆಯುಧಗಳಲ್ಲಿ ಉತ್ತಮವಾದ ಶಾರ್ಙ್ಗವು ಬಂದಿತು.

ತೆಳುವಾಗಿ ಮೃದುವಾಗಿ ಲಲಿತವಾಗಿರುವುದಿದು.
ಸ್ತ್ರೀ ಸ್ವಭಾವವನಾಂತು ಮೆರೆಯುವುದು. ಬೆನ್ನಿನಲಿ
ಚಿನ್ನವನು ಕೆತ್ತಿಹುದು. ಹರಿಯಿದನು ಹಿಡಿದಿರಲು
ಶತ್ರುಗಳ ಸಂಘಕ್ಕೆ ತಾನೆ ಯಮನಾಗುವುದು
ಶ್ರೀಕೃಷ್ಣನೆಡೆಯಲ್ಲಿ, ಹೊಸ ಮೋಡದೊಡನಿರುವ
ಮಿಂಚುಬಳ್ಳಿಯ ಹಾಗೆ ರಂಜಿಸುವುದು. ॥ ೪೭ ॥

ಎಲೆ, ಎಲೈ ಶಾರ್ಙ್ಗವೇ, ಭಗವಂತನಾದ ನಾರಾಯಣನ ರೋಷವು ಶಾಂತವಾಗಿರುವುದು. ನಿನ್ನ ಸ್ಥಳಕ್ಕೇ ಹೊರಟುಹೋಗು. ಅಗೋ, ಹಿಂದಿರುಗಿತು ನಾನಿನ್ನು ಹೋಗುತ್ತೇನೆ. ಇಗೋ, ಈ ಕೌಮೋದಕಿಯು ಬಂದಿತು.

ಮಿಸುನಿಮಣಿಗಳು ಮಿನುಗೆ, ಚಿತ್ರಮಾಲೆಗಳುತ್ತ
ರೀಯವದು ಸೊಗಸುತಿರೆ, ಸುರವೈರಿ ವರ್ಗವನು
ಕತ್ತರಿಸುವಾಸೆ ಮಿಗೆ, ಗಿರಿತಟವನನುಕರಿಪ
ರೂಪಾಂತು, ತಡೆಯಿಂದ ಬಲ್ಪಾಂತು, ಬರುತಿಹುದು.
ಮೇಘವೃಂದಗಳು ಹಿಂಬಾಲಿಸಲು, ಗಗನದಲಿ
ಬೇಗ ಬೇಗನೆ ನುಗ್ಗಿ ಬರುತಲಿಹುದು. ॥ ೪೮ ॥

ಎಲೆ ಕೌಮೋದಕಿ, ಭಗವಂತನಾದ ನಾರಾಯಣನಿಗೆ ರೋಷವು ಶಾಂತವಾಗಿರುವುದು. ಅಗೋ, ಹಿಂದಿರುಗಿತು. ನಾನಿನ್ನು ಹೋಗುತ್ತೇನೆ. ಓಹೋ, ಪಾಂಚಜನ್ಯವು ಬಂದುಬಿಟ್ಟಿತು! ಇದು

ಪೂರ್ಣಚಂದ್ರನ ಹಾಗೆ, ಕುಂದಕುಮುದಗಳಿಂದ
ಹೆಣೆದ ಹಾರದ ಹಾಗೆ, ಬಿಳಿದಾಗಿ ಹೊಳೆಯುವುದು.
ನಾರಾಯಣನ ಮೊಗದ ತಾವರೆಯನುಗ್ರಹವ
ಪಡೆದಿಹುದು. ಪ್ರಳಯ ಸಾಗರದುಬ್ಬಿದಬ್ಬರಕೆ
ಸಮನೆನಿಸ ದನಿಯಿಹುದು. ಅದಕೇಳಿ ರಕ್ಕಸರ
ಮಡದಿಯರ ಗರ್ಭಗಳು ಜಾರಿಬೀಳುವುವು. ॥ ೪೯ ॥

ಎಲೈ ಪಾಂಚಜನ್ಯ, ಭಗವಂತನ ರೋಷವು ಶಾಂತವಾಗಿರುವುದು. ನೀನು ಹೋಗಬಹುದು. ಅಗೋ, ಹಿಂದಿರುಗಿತು. ಓಹೋ, ಈ ನಂದಕಾಸಿಯು ಬಂದಿತು. ಇದು

ಹೆಣ್ಣ ರೂಪಾಂತಿಹುದು. ರಣದಲಿ ಮಹಾಸುರರ
ಭಯಗೊಳಿಸಿ ನಡುಗಿಪುದು ಗಗನದಲಿ ವೇಗದಲಿ
ಬರುತಿಹುದು. ಉರಿಯುವುಲ್ಕೆಯ ಹಾಗೆ ತೋರುತಿಹುದು.
॥ ೫೦ ॥

ಎಲೈ ನಂದಕ, ಭಗವಂತನ ರೋಷವು ಶಾಂತವಾಗಿರುವುದು. ನೀನು ಹೋಗಬಹುದು. ಅಗೋ, ಹಿಂದಿರುಗಿತು. ಇನ್ನು ನಾನು ಹೋಗುತ್ತೇನೆ ಓಹೋ, ಇವು ಭಗವಂತನ ಉತ್ತಮಾಯುಧಗಳು :

ತನ್ನ ಕಿರಣಗಳಿಂದ ಸೂರ್ಯಮಂಡಲವ ನೆರೆ
ನಗುವ ನಂದಕವೆಂಬ ಖಡ್ಗವಿದು. ರಕ್ಕಸರ
ಗಟ್ಟಿಯಾದೆದೆಗಳನು ಕುಟ್ಟಿ ಹುಡಿಗೂಡಿಸುವ
ಬಲ್ಪನಾಂತಿರುವುದಿದು ಕೌಮೋದಕೀ ಗದೆಯು.
ಪ್ರಳಯಕಾಲದ ಮುಗಿಲ ಗುಡುಗಿನಿಂದದಿ ಮೊಳಗ
ನುಗುಳುವಾ ಹೆದೆಯುಳ್ಳ ವರಶಾರ್ಙ್ಗಚಾಪವಿದು.
ಬೆಳ್ದಿಂಗಳೆನೆ ಹೊಳೆದು ಗಂಭೀರ ಘೋಷದಲಿ
ಗರ್ಜಿಸುವ ಶಂಖವಿದು, ಪಾಂಚಜನ್ಯವಿದು. ॥ ೫೧ ॥

ಎಲೆ ಶಾಙ್ರ್ಗಚಾಪವೇ, ಕೌಮೋದಕೀ ಗದೆಯೆ,
ಪಾಂಚಜನ್ಯವೆ, ದೈತ್ಯರಂತಕನೆ ನಂದಕವೆ,
ಶತ್ರುದಳಗಳ ಸುಡುವ ಬೆಂಕಿಗಳೆ, ಕೇಳಿ
ಆ ಮುರಾರಿಯು ಶಾಂತನಾಗಿಹನು. ಭಗವಂತ
ನುಳಿದಿಹನು ರೋಷವನು. ಹಿಂದಿರುಗಿರಿನ್ನು.
ನಿಮ್ಮ ನೆಲೆಗೇ ಮತ್ತೆ ನಡೆಯಿರಿನ್ನು ॥ ೫೨ ॥

ಎಲ್ಲವೂ ಹಿಂದಿರುಗಿದವು. ಇನ್ನು ಹೊರಡೋಣ. ಏನಿದು, ಗಾಳಿಯು ಅತಿ ಬಿರುಸಾಗಿ ಬೀಸತೊಡಗಿತು! ಬಿಸಿಲಿನ ಬೇಗೆಯು ಅತಿ ಚುರುಕಾಯಿತು! ಬೆಟ್ಟಗಳು ಅಲಗುತ್ತಿವೆ! ಸಮುದ್ರಗಳು ಎದ್ದು ಬಿದ್ದು ಮೊರೆಯುತ್ತಿವೆ! ಮರಗಳು ಮುರಿದು ಬೀಳುತ್ತಿವೆ! ಮೋಡಗಳು ದಿಕ್ಕಾಪಾಲಾಗಿ ಓಡುತ್ತಿವೆ! ವಾಸುಕಿಯೇ ಮೊದಲಾದ ಸರ್ಪರಾಜರು ಮರೆಯಾಗಿ ಅಡಗಿಕೊಳ್ಳುತ್ತಿದ್ದಾರೆ! ಇದೇನಾಗಿದ್ದೀತು? ಓಹೋ ಭಗವಂತನ ವಾಹನವಾದ ಗರುಡನು ಬಂದಿರುವನು

ದೇವರಾಕ್ಷಸರ ಪರಿಖೇದದಿಂದುದಿಸಿದಾ
ಅಮೃತವನು ಸೆಳೆದುಯ್ದು ತಾಯ ಸೆರೆಯನು ಬಿಡಿಸ
ಲರಿಗಳನು ಸೆಣಸಿದನು. ಆ ಮುರಾರಿಗೆ 'ನಿನ್ನ
ಹೊರುವೆ' ನೆಂದಿವನೊಂದು ವರವಿತ್ತನಂದು. ॥ ೫೩ ॥

ಅಯ್ಯಾ, ಕಾಶ್ಯಪ ಪ್ರಿಯಸುತ, ಗರುಡ; ದೇವದೇವೇಶನಾದ ಭಗವಂತನು ರೋಷವನ್ನು ತೊರೆದು ಶಾಂತನಾಗಿರುವನು. ನಿನ್ನ ಸ್ಥಳಕ್ಕೇ ಹೋಗಬಹುದು. ಅಗೋ, ಹಿಂದಿರುಗಿದನು. ಇನ್ನು ನಾನು ಹೊರಡುತ್ತೇನೆ.

ಇವರೆಲ್ಲ. ...... ... .. ....... . . ... ... .. .....

......... .. ...... ..................... ......... ..........

ಅಚ್ಯುತನು ಕೋಪಿಸಲು ಕಳೆಯುಳಿದು, ಭಯಗೊಂಡು
ಮಣಿಮಕುಟವಲುಗುತಿರೆ ಗಡಗಡನೆ ನಡುಗಿದರು.

ಶಾಂತನಾದುದ ಕೇಳಿ ಸಂತಾಪವನು ತೊರೆದು
ಸಂತಸದಿ ಮನೆಗಳಿಗೆ ನಡೆಯುತಿಹರು. || ೫೪ ||

ಇನ್ನು ನಾನು ಕೂಡ ಮನೋಹರವಾದ ಮೇರುಗುಹೆಗೇ ಹೋಗುತ್ತೇನೆ (ಹೋಗುತ್ತಾನೆ)

ವಾಸುದೇವ — ಇನ್ನು ನಾನು ಕೂಡ ಪಾಂಡವರ ಶಿಬಿರಕ್ಕೇ ಹೋಗುತ್ತೇನೆ.

(ತೆರೆಯಲ್ಲಿ)

ಬೇಡ, ಬೇಡ, ಹೋಗಬೇಡ

ವಾಸುದೇವ — ಓಹೋ, ವೃದ್ಧರಾಜನ ಸ್ವರದಂತಿದೆ! ಇಗೊ, ನಿಂತೆನು.

(ಬಳಿಕ ಧೃತರಾಷ್ಟ್ರನು ಪ್ರವೇಶಿಸುತ್ತಾನೆ)

ಧೃತರಾಷ್ಟ್ರ — ಭಗವಂತನಾದ ನಾರಾಯಣನು ಎಲ್ಲಿರಬಹುದು? ಪಾಂಡವರಿಗೆ ಶ್ರೇಯಸ್ಸನ್ನುಂಟುಮಾಡುವ ಭಗವಂತನೆಲ್ಲಿರಬಹುದು? ವಿಪ್ರರಿಗೆ ಪ್ರಿಯನಾದ ಭಗವಂತನೆಲ್ಲಿದ್ದಾನು? ದೇವಕಿನಂದನನಾದ ಆ ಭಗವಂತನೆಲ್ಲಿದ್ದಾನು?

ಶಾರ್ಙ್ಗಪಾಣಿಯೆ ನನ್ನ ಮಗನು ತಪ್ಪೆಸಗಿದನು.
ಈಗಲಿದೊ, ದೇವೇಶ, ನಿನ್ನ ಪಾದದಲೆನ್ನ
ತಲೆಯ ಮಣಿದಿಡುತಲಿಹೆನು. || ೫೫ ||

(ಕಾಲಿಗೆ ಬೀಳುತ್ತಾನೆ)

ವಾಸುದೇವ — ಅಯ್ಯೋ, ಅಯ್ಯೋ, ಪೂಜ್ಯನು ಬಿದ್ದುಬಿಟ್ಟನಲ್ಲಾ! ಏಳಬೇಕು, ಮೇಲಕ್ಕೇಳಬೇಕು.

ಧೃತರಾಷ್ಟ್ರ — ಅನುಗೃಹೀತನಾದೆ. ಭಗವಂತನೇ, ಇದೋ ಈ ಅರ್ಘ್ಯವನ್ನೂ ಪಾದ್ಯವನ್ನೂ ಸ್ವೀಕರಿಸಬೇಕು.

ವಾಸುದೇವ — ಎಲ್ಲವನ್ನೂ ತೆಗೆದುಕೊಳ್ಳುತ್ತೇನೆ. ನಿನಗೆ ಮತ್ತೆ ಇನ್ನಾವ ಸಂತೋಷವನ್ನುಂಟುಮಾಡಲಿ?

ಧೃತರಾಷ್ಟ್ರ — ಭಗವಂತನು ನಮ್ಮಲ್ಲಿ ಪ್ರಸನ್ನನಾಗಿರುವಲ್ಲಿ ಮತ್ತೇನನ್ನು ತಾನೇ ಬಯಸಲಿ?

ವಾಸುದೇವ — ಪೂಜ್ಯನು ಹೋಗಿಬರಬಹುದು

ಧೃತರಾಷ್ಟ್ರ — ಭಗವಂತನಾದ ನಾರಾಯಣನ ಆಜ್ಞೆಯಂತಾಗಲಿ.

(ಹೋಗುತ್ತಾನೆ)

(ಭರತ ವಾಕ್ಯ)

ಹಿಮವಂತ ವಿಂಧ್ಯಗಳೆ ಕುಂಡಲಗಳೆನಲು
ಸಾಗರದ ಸೆರಗಿನೀ ಧರಣಿಯೆಲ್ಲವನು
ಒಂದೆ ಕೊಡೆನೆರಳಿನಲಿ ಪಾಲಿಸುತಲಿರಲಿ
ನಮ್ಮ ರಾಜನು ರಾಜಸಿಂಹನೊಲವಿನಲಿ. ॥ ೫೬ ॥

(ಎಲ್ಲರೂ ಹೋಗುತ್ತಾರೆ)

ದೂತವಾಕ್ಯವು ಮುಗಿಯಿತು

---

## ಪಾತ್ರಗಳು

ಸೂತ್ರಧಾರ
ಧೃತರಾಷ್ಟ್ರ
ಗಾಂಧಾರಿ
ದುಶ್ಶಲೆ
ಪ್ರತೀಹಾರಿ
ದುರ್ಯೋಧನ
ದುಶ್ಶಾಸನ
ಶಕುನಿ
ಘಟೋತ್ಕಚ
ಭಟ

---

# ದೂತ ಘಟೋತ್ಕಚ



(ನಾಂದಿಯಾದ ಮೇಲೆ ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

ಸೂತ್ರಧಾರ— ತ್ರಿಭುವನಕೆ ತಾನೊಂದೆ ಗತಿಯಾಗಿ, ಕಷ್ಟದಲಿ
ದಿವಿಜರಿಗುಪಾಯಗಳ ಯುಕ್ತಿಗಳ ನೆಲೆಯಾಗಿ,
ಎಡೆಬಿಡದೆ ನಡೆವ ಲೋಕತ್ರಯದ ನಾಟಕಕೆ
ಪೀಠಿಕಾ ಪ್ರತಿಸಮಾಪನದೊಡನೆ ವಸ್ತುಗಳ
ನನುಗೊಳಿಸಿ ತೋರಿಸುವ ಸೂತ್ರಧಾರಕನೆನಿಸಿ
ಮೆರೆವ ನಾರಾಯಣನು ಪಾಲಿಸಲಿ ನಿಮ್ಮನೊಲಿದು. ॥೧॥

ಆರ್ಯ ಮಹಾಶಯರಲ್ಲಿ ವಿಜ್ಞಾಪನೆ. ಓಹೋ, ನಾನು ವಿಜ್ಞಾಪಿಸುವುದರಲ್ಲಿ ತೊಡಗಿರುವಾಗಲೇ ಗದ್ದಲವಾಗುವ ಹಾಗೆ ಕೇಳಿಸುವುದಲ್ಲ! ಇರಲಿ, ನೋಡೋಣ.

(ತೆರೆಯಲ್ಲಿ)

ಅಯ್ಯಾ, ಅಯ್ಯಾ, ವಿಜ್ಞಾಪಿಸಿರಿ, ವಿಜ್ಞಾಪಿಸಿರಿ.

ಸೂತ್ರಧಾರ— ಆಗಲಿ, ತಿಳಿಯಿತು. ಜನಾರ್ದನ ಸಹಾಯನಾದ ಧನಂಜಯನು ಸಂಶಪ್ತಕರ ಸೈನ್ಯದ ಮೇಲೆ ನಡೆಯಲು ಆ ಬಳಿಕ ಧೃತರಾಷ್ಟ್ರನ ಕಡೆಯವರು ಭೀಷ್ಮವಧೆಯಿಂದುಂಟಾದ ಕ್ರೋಧದಿಂದ ಎಲ್ಲರೂ ಸುತ್ತ ಮುತ್ತಿಕೊಂಡು ಈ ಅಭಿಮನ್ಯು ಕುಮಾರನನ್ನು ಕೊಂದು ಹಾಕಿದರು. ಇತ್ತಲಾದರೋ

ಅರ್ಜುನನ ಬರವನೇ ಶಂಕಿಸುತ ಭಯಗೊಂಡು,
ಪಾರ್ಥನೈದಿದ ದಿಕ್ಕನಡಿಗಡಿಗೆ ನೋಡುತ್ತ

ಸೌಭದ್ರ ಬಾಣಗಳ ಗಾಯದಲಿ ವೈಮರೆತು
ದೊರೆಗಳೆಲ್ಲರು ತಮ್ಮ ಮನೆಗಳಿಗೆ ಹೋಗುತಿಹರು. ॥ ೨ ॥

(ಹೋಗುತ್ತಾನೆ)

(ಸ್ಥಾಪನೆ ಮುಗಿಯಿತು)

---

(ಬಳಿಕ ಭಟನು ಪ್ರವೇಶಿಸುತ್ತಾನೆ)

ಭಟ — ವಿಜ್ಞಾಪಿಸಿರಿ, ವಿಜ್ಞಾಪಿಸಿರಿ. ನೂರ್ವರು ಪುತ್ರರನ್ನು ಪಡೆದು ಶ್ಲಾಘ್ಯರಾದ ಬಾಂಧವರುಳ್ಳವನೆನಿಸಿಕೊಂಡು, ವಿಜ್ಞಾನದಿಂದ ವಿಸ್ತಾರವಾಗಿರುವ ವಿನಯಾಚಾರಗಳೆಂಬ ದೀರ್ಘದೃಷ್ಟಿಗಳುಳ್ಳ ಧೃತರಾಷ್ಟ್ರ ಮಹಾರಾಜನಿಗೆ ಹೀಗೆಂದು ವಿಜ್ಞಾಪಿಸಿರಿ :—

"ಯೋಧ ರಥ ವಾಜಿ ವಾರಣಗಳನು ಕೊಂದಿಕ್ಕಿ
ರಾಜರಗಣಿತಬಲವನಭಿಮನ್ಯು ಕಲಕಿದನು.
ಬಾಲನಾದರು ತಾನು ಲೀಲೆಯಿಂದರ್ಜುನನ
ಕರ್ಮವನೆ ತೋರಿದನು. ರಣದಲಂತುರವಣಿಸಿ
ದಭಿಮನ್ಯುವನು ಸುತ್ತಿ, ನೂರಾರು ನರಪತಿಗ
ಳೆಲ್ಲಕಡೆಯಿಂದೊತ್ತಿ ಮುತ್ತಿ ಕೊಂದಿಕ್ಕಿದರು ;
ಗಗನದಲಿ ನಿಂದವನ ಸಾಹಸವ ನೋಡಬಂ
ದಾಪಿತಾಮಹನಂಕವೇರಿಸಿದರೆಂ"ದು. ॥ ೩ ॥

(ಬಳಿಕ ಧೃತರಾಷ್ಟ್ರ, ಗಾಂಧಾರಿ, ದುಶ್ಶಲೆ ಮತ್ತು ಪ್ರತೀಹಾರಿ ಇವರು ಪ್ರವೇಶಿಸುತ್ತಾರೆ)

ಧೃತರಾಷ್ಟ್ರ — ಏನಾಯಿತು, ಏನಾಯಿತು ?

ಯಾರೆನ್ನ ಕಿವಿಗಳನು ಹೊಲಸುಮಾಡಿದನಿಂತು ?
ಯಾರವನು ಪ್ರಿಯವೆಂದು ವಿಪ್ರಿಯವ ನುಡಿಯುವನು ?
ಯಾರವನು ಶಿಶುವಧೆಯ ಪಾತಕದ ಕಲೆಯಾಂತ
ನಮ್ಮ ವಂಶಕ್ಷಯವನಳುಕದೆಯೆ ಘೋಷಿಸುವನು ? ॥ ೪ ॥

ಗಾಂಧಾರಿ — ಮಹಾರಾಜ, ಕೇವಲ ಮಕ್ಕಳು ಮರಿಗಳನ್ನು ನಾಶಗೊಳಿಸುವ ಕುಲವಿಗ್ರಹವು ನಡೆಯುವುದೆಂದು ಗೊತ್ತಿಲ್ಲವೆ?

ಧೃತರಾಷ್ಟ್ರ — ಗಾಂಧಾರಿ, ಗೊತ್ತಿದೆ.

ಗಾಂಧಾರಿ — ಯಾವಾಗಿದ್ದೀತು ?

ಧೃತರಾಷ್ಟ್ರ — ಗಾಂಧಾರಿ, ಕೇಳು :

ಈಗಳಭಿಮನ್ಯುವಿನ ಮರಣದಿಂ ಕೋಪ ಮಿಗೆ
ಕೆರಳಿರಲು, ಕೃಷ್ಣನತಿರೋಷದಲಿ ಕಡಿವಾಣ
ಚಾವಟಿಯ ಹಿಡಿದು ಬರಲಾ ಭಯಂಕರ ಧನುವ
ಕೆಳಿಗೊಂಡು ಪಾರ್ಥನಾ ವೈರಿಗಳ ಸದೆಯುವನು ;
ಲೋಕವೇ ತಾನಳಿದು ತಣ್ಣಗಾಗುವುದು. ॥ ೫ ॥

ಗಾಂಧಾರಿ — ಹಾ, ಅಭಿಮನ್ಯೂ, ಉತ್ತಮ ಪುರುಷರನ್ನು ನಾಶಗೊಳಿಸುವ ಇಂಥ ಕುಲವಿಗ್ರಹವು ನಡೆಯುತ್ತಿರುವಲ್ಲಿ ಹುಡುಗತನದಿಂದ ಅದರಲ್ಲಿ ನುಗ್ಗಿ ನಮ್ಮ ದೌರ್ಭಾಗ್ಯದಿಂದ, ಎಲೈ ಪೌತ್ರಕ, ಎಲ್ಲಿಗೆ ಹೊರಟು ಹೋದೆ?

ದುಶ್ಶಲೆ — ಯಾವನು ವಧೂ ಉತ್ತರೆಗೆ ವೈಧವ್ಯವನ್ನುಂಟುಮಾಡಿದನೋ ಅವನು ತನ್ನ ಮಡದಿಯರಿಗೂ ವೈಧವ್ಯವನ್ನು ತಂದಿಟ್ಟಂತೆಯೇ ಸರಿ.

ಧೃತರಾಷ್ಟ್ರ — ಅದು ಯಾರು, ಈ ವ್ಯಸನಾರ್ಣವಕ್ಕೆ ಸೇತುವೆಯನ್ನು ಕಟ್ಟಿದವನು ?

ಭಟ — ಮಹಾರಾಜ, ನಾನು.

ಧೃತರಾಷ್ಟ್ರ — ಯಾರು, ನೀನು ?

ಭಟ — ಮಹಾರಾಜ, ನಾನು ಜಯತ್ರಾತನಲ್ಲವೆ?

ಧೃತರಾಷ್ಟ್ರ — ಜಯತ್ರಾತ,

ಯಾವನಭಿಮನ್ಯುವನು ಕೊಂದವನು ? ಯಾವನಿಗೆ
ಜೀವನವು ಬೇಡವಾಯ್ತಾರು ಪಾಂಡವರೆಂಬ
ಪಂಚಾಗ್ನಿಗಳಿಗೆ ತಾನುರುವಲಾದವನು? ॥ ೬ ॥

ಭಟ— ಮಹಾರಾಜ, ಬಹುಜನ ರಾಜರು ಒಟ್ಟಾಗಿ ಸೇರಿಕೊಂಡು ಅಭಿಮನ್ಯು ಕುಮಾರನನ್ನು ಕೊಂದುಹಾಕಿದರು. ಜಯದ್ರಥನು ಬರಿಯ ಕಾರಣವಾದನು

ಧೃತರಾಷ್ಟ್ರ—ಏನು, ಏನು ? ಜಯದ್ರಥನು ಕಾರಣನಾದನೆ ?

ಭಟ— ಮಹಾರಾಜ, ಹೌದು.

ಧೃತರಾಷ್ಟ್ರ— ಅಯ್ಯೋ, ಜಯದ್ರಥನು ಸತ್ತನು.

(ಅದನ್ನು ಕೇಳಿ ದುಶ್ಶಲೆಯು ಅಳುತ್ತಾಳೆ)

ಧೃತರಾಷ್ಟ್ರ— ಯಾರಿವಳು, ಅಳುತ್ತಿರುವಳು ?

ಪ್ರತೀಹಾರಿ— ಮಹಾರಾಜ, ರಾಜಪುತ್ರಿ ದುಶ್ಶಲೆಯು

ಧೃತರಾಷ್ಟ್ರ— ಮಗಳೇ, ಅಳಬೇಡ. ಅಳಬೇಡ. ನೋಡು,

ನಿನ್ನ ಪತಿ ತಾನಾಗಿ ಗಾಂಡೀವಿಶರಗಳಿಗೆ
ಗುರಿಯಾಗಿ ನಿಂದಿರಲು, ನಿಜ, ನಿನ್ನ ಮಾಂಗಲ್ಯ
ಸೌಭಾಗ್ಯ ರುಚಿಸದಾತನಿಗೆಂಬುದು. ॥ ೭ ॥

ದುಶ್ಶಲೆ— ಹಾಗಾದರೆ ತಂದೆಯು ನನಗೆ ಅಪ್ಪಣೆಕೊಡಬೇಕು. ನಾನು ಕೂಡ ವಧೂ ಉತ್ತರೆಯ ಸಮೀಪಕ್ಕೇ ಹೋಗುತ್ತೇನೆ.

ಧೃತರಾಷ್ಟ್ರ— ಮಗಳೇ, ಏನೆಂದು ಹೇಳುತ್ತೀಯೆ ?

ದುಶ್ಶಲೆ— ತಾತ, ಹೀಗೆ ಹೇಳುತ್ತೇನೆ:—“ಈಗಿನ ಸಮಯಕ್ಕೆ ಒಪ್ಪು ವಂತೆ ನೀನು ತಾಳುವ ವೇಷವನ್ನೇ ನಾನು ಕೂಡ ಧರಿಸುತ್ತೇನೆ” ಎಂದು.

ಗಾಂಧಾರಿ— ಮಗಳೇ, ಬೇಡ, ಬೇಡ, ಅಮಂಗಳವನ್ನು ನುಡಿಯಬೇಡ. ನಿನ್ನ ಗಂಡನು ಬದುಕಿರುವನಲ್ಲವೇ ?

ದುಶ್ಶಲೆ— ಅಮ್ಮಾ, ಇಷ್ಟುಮಟ್ಟಿನ ಒಳ್ಳೆಯ ಅದೃಷ್ಟವು ನನಗೆಲ್ಲಿಂದ ಬರಬೇಕು ? ಜನಾರ್ದನ ಸಹಾಯನಾದ ಧನಂಜಯನಿಗೆ ವಿಪ್ರಿಯವನ್ನುಂಟುಮಾಡಿ ಯಾವನು ತಾನೇ ಜೀವದಿಂದುಳಿದಾನು!

ಧೃತರಾಷ್ಟ್ರ — ದುಃಖಿನಿಯಾದ ದುಶ್ಶಲೆಯು ಸತ್ಯವನ್ನೇ ನುಡಿದಿರುವಳು. ಏಕೆಂದರೆ,

ಎಂಟು ತೋಳ್ಗಳೆ ತಲೆಗೆ ದಿಂಬಾಗೆ ಶ್ರೀಕೃಷ್ಣ
ನಂಕದಲಿ ಬಹುಕಾಲ ಬೆಳೆದವನು. ಮದಿಸಿದಾ
ಹಲಧರಗೆ ಪ್ರೀತಿಯಿಂದೆರಡನೆಯ ಮದವಾಗಿ
ಮೆರೆದವನು. ಸುರರಿಗೆಣೆಯೆನಿಪ ವಿಕ್ರಮವಾಂತ
ಪಾರ್ಥರಿಗೆ ಪ್ರೇಮದಾಗರವಾಗಿ ನಲಿದವನು.
ಅಂಥವನ ಕೊಂದಾವನುಳಿಯುವನು ? ಲೋಕದಲಿ
ಜೀವಿತವ ಬಹುಕಾಲವುಳಿಸಿಕೊಳ್ಳುವನು ? || ೮ ||

ಜಯತ್ರಾತ, ಹೇಳು, ಆ ಅವಸ್ಥೆಯಲ್ಲಿದ್ದ ಮಗನನ್ನು ನೋಡಿ ಆ ಗಾಂಡೀವಧನ್ವಿಯು ಏನುಮಾಡಿದನು ?

ಭಟ — ಮಹಾರಾಜ, ಏನು, ಇದು ಅರ್ಜುನನ ಇದಿರಿಗೆ ನಡೆಯಿತೆಂದು ತಿಳಿದಿರುವಿರಾ ?

ಧೃತರಾಷ್ಟ್ರ — ಹೇಗೆ ? ಅರ್ಜುನನೂ ಅಲ್ಲಿರಲಿಲ್ಲವೇ ?

ಭಟ — ಮಹಾರಾಜ, ಸಂದೇಹವೇನು ?

ಧೃತರಾಷ್ಟ್ರ — ಅದು ಹೇಗೆ ನಡೆಯಿತು ? ಹೇಳು

ಭಟ — ಮಹಾರಾಜ, ಕೇಳಬೇಕು ಜನಾರ್ದನ ಸಹಾಯನಾದ ಧನಂಜಯನು ಸಂಶಪ್ತಕರ ಸೈನ್ಯದಮೇಲೆ ನಡೆಯಲು ಆ ಅಭಿಮನ್ಯು ಕುಮಾರನು ಬಾಲಭಾವದಿಂದ ದೋಷವನ್ನರಿಯದೆ ಯುದ್ಧಕ್ಕೆ ಹೊರಟುಬಂದನು.

ಧೃತರಾಷ್ಟ್ರ — ಅಯ್ಯೋ, ಅವನ ವಧೆಯು ಆ ಸಮಯಕ್ಕೆ ತಕ್ಕಂತೆಯೇ ಇದೆ ! ಶಾರ್ದೂಲವು ಹತ್ತಿರದಲ್ಲಿದ್ದಾಗ ಗುಹೆಗೆ ನುಗ್ಗಿ ತೊಂದರೆಗೊಳಿಸಲು ಯಾರು ಸಮರ್ಥರಾದಾರು ? ಆ ಬಳಿಕ, ಉಳಿದ ಪಾಂಡವರು ಏನು ಮಾಡುತ್ತಿದ್ದಾರೆ ?

---

*ಕೃಷ್ಣಸ್ಯಾಂಸಭುಜೋಪಧಾನ ರಚಿತೇ ಯೋಽಂಕೇ ವಿವೃದ್ಧಶ್ಚಿರಂ.

ಭಟ — ಮಹಾರಾಜ, ಕೇಳಬೇಕು,

ಅರ್ಜುನನು ನೋಡಲೆಂದವನ ದೇಹವ ಚಿತೆಯ
ಮೇಲಿಡದೆ ತಾವೆಲ್ಲ ಬೇಕೆಂದು ಕಾದಿಹರು.
ಅವನ ಮೈಯಲಿ ಹೊಡೆದ ದೊರೆಗಳೆಲ್ಲರ ಹೆಸರ
ನಡಿಗಡಿಗೆ ನೆನೆನೆನೆದು ನುಡಿಯುತಿಹರು. ॥ ೯ ॥

ಧೃತರಾಷ್ಟ್ರ — ಗಾಂಧಾರಿ, ಹಾಗಾದರೆ ಬಾ. ಗಂಗಾತೀರಕ್ಕೇ ಹೋಗೋಣ.

ಗಾಂಧಾರಿ — ಮಹಾರಾಜ, ಅಲ್ಲಿ ಮುಳುಗಿ ಸ್ನಾನಮಾಡೋಣವಲ್ಲವೇ ?

ಧೃತರಾಷ್ಟ್ರ — ಗಾಂಧಾರಿ, ಕೇಳು,

ಈಗಲೇ ಕೊಟ್ಟೇನು ತರ್ಪಣವನಳಿದರಿಗೆ,
ತಮ್ಮ ತಪ್ಪಿನಲಳಿದ ನಿನ್ನ ಮಕ್ಕಳಿಗೆ.
ಶಕ್ತನೆನಿಸೆನು ಕೇಳು ಸಲಿಲದಾನಗಳಿಂದ
ನೃಪರ ಶಿಬಿರಕೆ ಕೇಡ ಕೋರುವುದಕೆ. ॥ ೧೦ ॥

(ಬಳಿಕ ದುರ್ಯೋಧನನೂ, ದುಶ್ಶಾಸನನೂ, ಶಕುನಿಯೂ ಪ್ರವೇಶಿಸುತ್ತಾರೆ)

ದುರ್ಯೋಧನ — ವತ್ಸ, ದುಶ್ಶಾಸನ,

ಅಭಿಮನ್ಯು ವಧೆಯಿಂದ ವೈರ ಸುಸ್ಥಿರವಾಯ್ತು.
ಜಯವಾಯ್ತು, ವೈರಿಗಳು ನಡುಗಿ ಸೋತೋಡಿದರು.
ಮಧುಸೂದನನ ಮದವು ಕಿತ್ತು ಬುಡಮೇಲಾಯ್ತು.
ಅಭ್ಯುದಯ ಕೀರ್ತಿಗಳು ನನಗೊದಗಿ ಬಂದವಿಂದು. ॥ ೧೧ ॥

ದುಶ್ಶಾಸನ — ಅಬ್ಬಬ್ಬಾ !

ಪಾಂಡವರ ನಡೆಗೆಡಿಸಿ ತಡೆದೆವು. ಜಯದ್ರಥನ
ಬಲದಿಂದ ಶತ್ರುಗಳ ಬಲುಬಲವನಾಕ್ರಮಿಸಿ,

---

*ಅದ್ಯೈವ ದಾಸ್ಯಾಮಿ ಜಲಂ ಹತೇಭ್ಯಃ
ಸ್ವೇನಾಪರಾಧೇನ ತವಾತ್ಮಜೇಭ್ಯಃ ।
ನತ್ವಸ್ಮಿ ಶಕ್ತಃ ಸಲಿಲಪ್ರದಾನೈಃ
ಕರ್ತುಂ ನೃಪಾಣಾಂ ಶಿಬಿರೋಪರೋಧಂ ॥

ಭೀಷ್ಮ ಕೆಡೆದುದರಿಂದ ಬಂದ ದುಃಖವ ನೆನೆದು,
ಶರ ಶತವ ಸುರಿಸುರಿದು ಎರಡನೆಯ ಪಾರ್ಥನಿವ
ನೆಂಬ ಸೌಭದ್ರನನು ಕಡಿದು ನೆಲಕುರುಳಿಸಿದೆ
ವಿಂದಿವನ ಯುದ್ಧದಲಿ ಮಗನ ಕೊಂದುದರಿಂದ
ತೀವ್ರಶೋಕದ ಶರವನವರೆದೆಗೆ ನೆಟ್ಟಿವಹುದು. ‖ ೧೨ ‖

ಶಕುನಿ — ಈ ಜಯದ್ರಥನಿಂದು ರಣದಲಿ ಮಹಾಕಾರ್ಯ
ವೆಸಗಿದನು ಇಷ್ಟು ಪೌರುಷವಿವನಿಗುಂಟೆಂದು
ದೊರೆಗಳಾರೂ ತಿಳಿಯರೀ ಕದನದೊಳಗಿವನು
ನೈಗೊಟ್ಟು ಕಾದಿ, ಮಗನೊಡನೆಯೇ ಪಾಂಡವರ
ಎಣೆಯಿಲ್ಲವೆನಿಸಿದಾ ಕೀರ್ತಿಯನು ನೆಳೆದನಿಂದು. ‖ ೧೩ ‖

ದುರ್ಯೋಧನ — ಮಾವ,

ಶಕುನಿ — ವತ್ಸ, ಏನು ?

ದುರ್ಯೋಧನ — ಮಾವ, ಇತ್ತ ಬರಬೇಕು. ವತ್ಸ, ದುಶ್ಶಾಸನ, **ಇತ್ತ ಬಾ.** ಪೂಜ್ಯನಾದ ತಂದೆಯನ್ನು ವಂದಿಸೋಣ.

ಶಕುನಿ — ವತ್ಸ, ದುರ್ಯೋಧನ, ಬೇಡ, ಬೇಡ.
ಅವನಿಗೀ ಕುಲಯುದ್ಧವಿನಿತು ರುಚಿಸದು, ಕೇಳು.
ಪಾಂಡವರನೊಲಿದಿಹನು ; ನಮ್ಮನೇ ಬಯ್ಯುವನು.
ಆದರಿಂದ ಯುದ್ಧ ಮುಗಿಯಲು ಮಿಗಿಲು ಜಯವಾಂತು
ನಲಿಯುತ್ತಲಾತನನು ಕಾಣುವುದೆ ತೆರವು. ‖ ೧೪ ‖

ದುರ್ಯೋಧನ — ಮಾವ, ಆಗದು, ಹೀಗೆನ್ನಲಾಗದು. **ಹೇಗೆ ಹೇಗೆ** ಬೇಕಾದರೂ ಆಗಲಿ, ಪೂಜ್ಯನಾದ ತಂದೆಯನ್ನು ವಂದಿಸಿ ಬರೋಣ. (ಮುಂದೆ ಹೋಗುತ್ತಾನೆ)

ದುರ್ಯೋಧನ — ತಾತ, ನಾನು ದುರ್ಯೋಧನ, ವಂದಿಸುತ್ತೇನೆ.

ದುಶ್ಶಾಸನ — ತಾತ, ನಾನು ದುಶ್ಶಾಸನ, ವಂದಿಸುತ್ತೇನೆ.

ಶಕುನಿ — ನಾನು ಶಕುನಿ, ವಂದಿಸುತ್ತೇನೆ.

ಎಲ್ಲರೂ — ಏನಿದು ! ಆಶೀರ್ವಾದವನ್ನೇ ಮಾಡಲಿಲ್ಲ !

ಧೃತರಾಷ್ಟ — ಮಗನೇ, ಹೇಗೆ ಆಶೀರ್ವಾದಮಾಡಲಿ ?

ಕೃಷ್ಣ ಪಾರ್ಥರ ಹೃದಯವೆನಿಸಿದಭಿಮನ್ಯುವನು —
ಬಾಲನನು — ಕೊಂದು, ಬಾಳ್ವಾನೆಯನು ನೀಗಿದರಿ
ಗೆಂತು ಹರಕೆಯನೀಗ ನುಡಿಯುವುದು ಹೇಳು ? ॥ ೧೫ ॥

ದುರ್ಯೋಧನ — ತಾತ, ಏತಕ್ಕಿಷ್ಟು ಗಾಬರಿ ?

ಧೃತರಾಷ್ಟ — ಇಷ್ಟು ಗಾಬರಿಯೇತಕ್ಕೆಂದೆಯಾ ?

ಬಹುಪುತ್ರರುದಿಸಿದೀಕುಲದಲೊಬ್ಬಳೆ ಮಗಳು
ಹುಟ್ಟಿ, ಸುತ ಶತಕಿಂತ ಮಿಗಿಲಾಗಿ ತೋರುವಳು.
ಆ ಮಗಳು, ಬಾಂಧವರ, ನಿಮ್ಮ ದಯದಿಂದಿಂದು
ಹಾಳು ವೈಧವ್ಯವನು ಪಡೆಯುವಳು ಎಂದು. ॥ ೧೬ ॥

ದುರ್ಯೋಧನ — ಜಯದ್ರಥನಿಗೂ ಇದಕ್ಕೂ ಸಂಬಂಧವೇನು ?

ಧೃತರಾಷ್ಟ — ಬಹು ಬುದ್ಧಿವಂತನಾದ ಅವನೇ ಅಲ್ಲವೇ ಪಾಂಡವರನ್ನು ತಡೆದು ನಿಲ್ಲಿಸಿದವನು ?

ದುರ್ಯೋಧನ — ಆಃ ! ಅವನು ತಡೆದನು , ಇನ್ನೂ ಅನೇಕರೂ ತಡೆದರು.

ಧೃತರಾಷ್ಟ — ಅಯ್ಯೋ, ಕಷ್ಟ.

ಪುತ್ರನನು, ಒಬ್ಬೊಂಟಿಯಾಗಿ ಬಂದೆಳೆಯನನು,
ಬಹುಜನಗಳೊಂದಾಗಿ, ನಿರ್ಘೃಣಾತ್ಮಕರಾಗಿ
ಹೊಡೆವಂದದೆಂತವರ ತೋಳು ಬೀಳದೆ ನಿಂದುವು ? ॥ ೧೭ ॥

ದುರ್ಯೋಧನ — ತಾತ,

ಮುದುಕನನು, ಭೀಷ್ಮನನು ಮೋಸದಲಿ ಸಂಹರಿಸಿ
ದವರ ತೋಳುಗಳೆಂತು ಬೀಳದೆಯೆ ನಿಂದಿಹವು ?
ಅಭಿಮನ್ಯುಬಾಲನು, ಪರಾಕ್ರಮದಿ ಬಾಲಕನೆ ?
ಆ ವೀರನನು ಕೊಲ್ಲಲೆಮ್ಮ ತೋಳ್ಬೀಳಬೇಕೇ. ॥ ೧೮ ॥

ಧೃತರಾಷ್ಟ್ರ — ಮಗನೇ, ಭೀಷ್ಮನನ್ನು ಕೆಡವಿದ್ದೂ ಅಭಿಮನ್ಯುವನ್ನು ಕೊಂದದ್ದೂ ಒಂದಕ್ಕೊಂದು ಸಮನೋ ?

ದುರ್ಯೋಧನ — ತಾತ, ಹೇಗೆ ಸಮನಲ್ಲ ?

ಧೃತರಾಷ್ಟ್ರ — ಮಗನೆ, ಕೇಳು :

ಭೀಷ್ಮನಿಗೆ ಸಾವು ತನ್ನಿಚ್ಛೆಯಲಿ ಬರುತಿರಲು
ತಾನೆ ಯುಕ್ತಿಯ ಹೇಳಿ ಆತ್ಮತೃಪ್ತಿಯಲಳಿದ
ನಿವನೊ, ಬಾಲನು ; ನಮ್ಮ ಕುರುವಂಶನಾಯಕನು ;
ಅರ್ಜುನನ ಮೊದಲು ಕುಡಿ, ಕತ್ತರಿಸಲಾಯಿತಿಂದು. ॥೧೯॥

ದುಶ್ಶಾಸನ — ತಾತ, ಅವನು ಹುಡುಗನಾದರೂ ಹುಡುಗನಲ್ಲ. ಅಭಿಮನ್ಯುವು —

ಧೃತರಾಷ್ಟ್ರ — ಏನು, ಏನು ; ದುಶ್ಶ್ಯಾಸನನು ಮಾತಾಡುತ್ತಾನೋ ?

ದುಶ್ಶಾಸನ — ಮತ್ತೇನು ?

ನೋಡುತ್ತ, ಕಾದುತ್ತ ನಿಂದ ನಮ್ಮೆದುರಿನಲಿ
ವಜ್ರಶಕ್ತಿಯನಾಂತ ಬಿಲ್ಲ ಕೈಯಲಿ ಹಿಡಿದು,
ಕಿರಣಮಾಲೆಯ ಸೂರ್ಯ ಸುರಿವಂತೆ ಬಾಣಗಳ
ಸುರಿಸುತ್ತ ದೊರೆಗಳೆಲ್ಲರ ಮೈಗೆ ನಾಟಿಸಿದನು. ॥೨೦॥

ಧೃತರಾಷ್ಟ್ರ — ಅಯ್ಯೋ, ಕಷ್ಟ,

ಬಾಲಕನು, ಒಬ್ಬೊಂಟಿಯಭಿಮನ್ಯುವಿಂತೆಸಗೆ,
ಪುತ್ರ ದುಃಖದಿ ಬೆಂದ ಪಾರ್ಥನಿನ್ನೇಗೈವನೋ ! ॥೨೧॥

ದುರ್ಯೋಧನ — ಏನು ಮಾಡುತ್ತಾನೆ ?

ಧೃತರಾಷ್ಟ್ರ — ನಿಮಗೆ ಆಯುಸ್ಸುಳಿದಿದ್ದರೆ, ಏನು ಮಾಡುತ್ತಾನೆಂಬುದನ್ನು ನೀವೇ ನೋಡುತ್ತೀರಿ.

ದುರ್ಯೋಧನ — ತಾತ, ಅದು ಯಾರು, ಅರ್ಜುನನೆಂಬವನು ?

ಧೃತರಾಷ್ಟ್ರ — ಮಗನೇ ಅರ್ಜುನನನ್ನೂ ಅರಿಯೆಯಾ ?

ದುರ್ಯೋಧನ— ಅರಿಯೆ.

ಧೃತರಾಷ್ಟ್ರ— ಹಾಗಾದರೆ ನಾನೂ ಅರಿಯೆ. ಆದರೆ ಅರ್ಜುನನ ಬಲವನ್ನೂ ವೀರ್ಯವನ್ನೂ ಬಲ್ಲವರು ಬಹು ಜನರಿದ್ದಾರೆ. ಅವರನ್ನು ಕೇಳು.

ದುರ್ಯೋಧನ— ತಾತ, ಯಾರನ್ನು ಕೇಳಬೇಕು? ಅರ್ಜುನನ ಬಲವನ್ನೂ ವೀರ್ಯವನ್ನೂ ಬಲ್ಲವರು ಯಾರು?

ಧೃತರಾಷ್ಟ್ರ— ಮಗನೇ, ಕೇಳು.

ಹಿಂದಾ ನಿವಾತ ರಾಕ್ಷಸರಸುಗಳುಪಹಾರ
ದಿಂದ ಪೂಜೆಯನಾಂತ ದೇವೇಂದ್ರನನು ಕೇಳು.
ಬೇಡರೂಪವ ತಳೆದು ಬಂದಂದು ದಿವ್ಯಾಸ್ತ್ರ
ದೆಸುಗೆಯಿಂದಾನಂದಗೊಂಡ ಹರನನು ಕೇಳು.
ಖಾಂಡವವ ಸುಡುವಂದು ಭುಜಗಾಹುತಿಯ ಮೆಚ್ಚು
ತರ್ಜುನನು ಕೊಡಲುಂಡು ತಣಿದಗ್ನಿಯನು ಕೇಳು.
ಕೇಳು ವಿದ್ಯಾಧರನನಂದು ನಿನ್ನನು ಗೆದ್ದು
ನೆರೆವಿಡಿದು ನಡೆದ ಚಿತ್ರಾಂಗದನನು. ॥ ೨೨ ॥

ದುರ್ಯೋಧನ— ಅರ್ಜುನನ ವೀರ್ಯವು ಇಷ್ಟು ಮಟ್ಟಿನದಾದರೆ ನಮ್ಮ ಸೈನ್ಯದಲ್ಲಿ ಅರ್ಜುನನಿಗೆ ಎದುರಾಗಿ ನಿಂತು ಯುದ್ಧಮಾಡುವ ಪ್ರತಿವೀರರಿಲ್ಲವೋ?

ಧೃತರಾಷ್ಟ್ರ— ಮಗನೇ, ಇದ್ದರ, ಯಾರವರು?

ದುರ್ಯೋಧನ— ಅಷ್ಟೇಕೆ, ಕರ್ಣನಿರುವನಲ್ಲ!

ಧೃತರಾಷ್ಟ್ರ— ಅಯ್ಯೋ ಪಾಪ, ಕರ್ಣನು ಹಾಸ್ಯಾಸ್ಪದನಾಗಿರುವನಲ್ಲಾ!

ದುರ್ಯೋಧನ— ಕಾರಣವೇನು?

ಧೃತರಾಷ್ಟ್ರ— ಕೇಳು,

ದೇವೇಂದ್ರ ಕವಚವನು ಕೊಂಡೊಯ್ದನರ್ಧರಥ
ನಸ್ತ್ರಗಳ ಸುಳ್ಳಾಡಿ-ಪಡೆಯಲವು ಜಳ್ಳಾದ-

ವನು ಕಂಪವುಳ್ಳವನು, ಮುದಿಸಿ ಮೈಮರೆಯುವನು—
ಇಂತಿರುವ ಕರ್ಣನಿಗೆ ಇಂದ್ರಾಗ್ನಿ ರುದ್ರರೊಲಿ
ದಸ್ತ್ರಗಳ ಕೊಡಲು ತಾನರ್ಜುನಗೆ ಸಮನೆನಿಪನು. ‖ ೨೩ ‖

ಶಕುನಿ — ನೀವು ನಮ್ಮನ್ನು ನಿಂದಿಸುವುದರಲ್ಲಿ ಬಹು ಗಟ್ಟಿಗರು.

ಧೃತರಾಷ್ಟ್ರ — ಶಕುನಿಯೇ ಮಾತಾಡುತ್ತಿದ್ದಾನೆ! ಅಯ್ಯಾ ಶಕುನಿ,
ಸತತವೂ ಜೂಜಿನಲಿ ತೊಡಗಿರುವ ನಿನ್ನಿಂದ
ನಮ್ಮ ವಂಶದಲಿಂತು ವೈರಾಗ್ನಿಯುದಿಸಿದುದು ;
ನೀನಿಟ್ಟ ಬೆಂಕಿಯಿದು, ಮಕ್ಕಳನು ಸುಡದೆ ಬಿಡದು. ‖ ೨೪ ‖

ದುರ್ಯೋಧನ — ಓಹೋ,
ನೆಲ ಗುಡುಗಿ ನಡಗುತಿದೆ, ಉಲ್ಕೆಗಳು ಬೀಳ್ವುವೆನೆ
ಗಗನ ಬೆಳಕಾಗುತಿದೆ ತಟ್ಟನಿಂತೇಕಾಗುತಿಹುದೋ! ‖ ೨೫ ‖

ಧೃತರಾಷ್ಟ್ರ — ಮಗನೇ, ನನಗೆ ಹೀಗೆ ತೋರುತ್ತದೆ.
ಮೊಮ್ಮಗನು ಮಡಿದುರುಳೆ ಕಂಡು ಮನದಲಿ ನೊಂದು
ದೇವೇಂದ್ರನಳುತಿರಲು ಕಣ್ಣೀರ ಹನಿಗಳೀ
ಉಲ್ಕೆಗಳ ರೂಪದಲಿ ಬೀಳುತಿಹವಿಂತು ‖ ೨೬ ‖

ದುರ್ಯೋಧನ — ಜಯುತ್ರಾತ, ಹೋಗು. ಪಾಂಡವರ ಶಿಬಿರದಲ್ಲಿ ಶಂಖ ಪಟಹ ಸಿಂಹನಾದ ಧ್ವನಿಗಳೆಲ್ಲವೂ ಒಟ್ಟಾಗಿ ಸೇರಿದ ಶಬ್ದ ಕೇಳಿಸುತ್ತದೆ. ಏತಕ್ಕಾಗಿ ಇಷ್ಟು ಶಬ್ದವಾಗುತ್ತಿದೆಯೋ ತಿಳಿದುಕೊಂಡು ಬಾ.

ಭಟ — ಮಹಾರಾಜನು ಆಜ್ಞೆ ಮಾಡಿದಂತಾಗಲಿ. (ಹೋಗಿ ಬಂದು) ಸಂಶಪ್ತಕರ ಸೈನ್ಯದ ಮೇಲೆ ಹೋಗಿದ್ದ ಅರ್ಜುನನು ಹಿಂದಿರುಗಿ ಬಂದ ಬಳಿಕ ಹತನಾದ ಮಗನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಕಣ್ಣೀರಿನಿಂದ ನೆನಸಿ, ಜನಾರ್ದನನು ಜರೆಯಲಾಗಿ, ಪ್ರತಿಜ್ಞೆ ಮಾಡಿರುವನಂತೆ.

ದುರ್ಯೋಧನ — ಏನೆಂದು, ಏನೆಂದು ?

ಭಟ— ಅವನಾ ಪ್ರಯತ್ನವನು ಕಂಡು ನೆಮ್ಮದಿಯಾಂತು,
ಅವನ ವಿಕ್ರಮದಿ ತಮ್ಮುತ್ಸಾಹ ವರ್ಧಿಸಲು
ಹರ್ಷದಲಿ ಮುಖವರಳೆ, ಗೆದ್ದೆವೆನ್ನುತ ತಿಳಿದು,
ತಟ್ಟನಂತವರು ಮಿಗೆ ಶಬ್ದವನು ಮಾಡಿದರು.
ಹಿರಿದೊರೆಗಳೆಲ್ಲರಾಕ್ಷೇಪಿಸಲು ಪಾರ್ಥಿವರು
ನುಗ್ಗಿ ಬಂದಾಕ್ರಮಿಸ ಯುವತಿ ಭೂಸುದತಿ ಬಲು
ಬೆದರಿದಳೊ ಎಂಬಂತೆ ನೆಲ ನಡುಗಿತಾಕ್ಷಣದಲಿ. ॥ ೨೭ ॥

ಧೃತರಾಷ್ಟ್ರ— ಆ ಪ್ರತಿಜ್ಞೆಯ ದನಿಯನಾಲಿಸಿದ ಮಾತ್ರದಲೆ
ಭೂಮಿ ನಡುಗಿದಳೆನಲು, ಬಾಣವನು ಹಿಡಿದಂದು
ಮೂರು ಲೋಕವೆ ನಡುಗದಿರದು ನಿಜವು. ॥ ೨೮ ॥

ದುರ್ಯೋಧನ— ಅವನು ಏನೆಂದು ಪ್ರತಿಜ್ಞೆ ಮಾಡಿದನು ?

ಭಟ— "ಯಾವನೆನ್ನಯ ಮಗನ ಕೊಂದನೋ, ಯಾರವನ
ಸಾವಿನಲಿ ನಲಿದರೋ, ಅವರೆಲ್ಲರನು ನಾಳೆ
ಸೂರ್ಯ ಮುಳುಗುವ ಮೊದಲೆ ಕೊಂದಿಕ್ಕಿಬಿಡುವೆ"ನೆಂದು. ॥ ೨೯ ॥

ದುರ್ಯೋಧನ— ಈ ಪ್ರತಿಜ್ಞೆಯು ನಡೆಯದಂತೆ ಪ್ರಯತ್ನ ಮಾಡುತ್ತೇನೆ.

ಧೃತರಾಷ್ಟ್ರ— ಮಗನೇ, ಏನು ಮಾಡುತ್ತೀಯೆ ?

ದುರ್ಯೋಧನ— ಎಲ್ಲ ಅಕ್ಷೋಹಿಣಿಗಳನ್ನೂ ಗುಂಪು ಕೂಡಿಸಿ ಜಯದ್ರಥನನ್ನು ಮುಚ್ಚಿ ಮರೆಮಾಡಿಬಿಡುತ್ತೇನೆ. ಅಲ್ಲದೆ,

ದ್ರೋಣನುಪದೇಶಗಳನನುಸರಿಸಿ, ಭೇದಿಸಲ
ಸಾಧ್ಯವೆನ್ನಿಸಿದೊಂದು ವ್ಯೂಹವನು ರಚಿಸುವೆನು.
ಆಸೆ ಕೈಗೂಡದೆಯೆ ಮನನೊಂದು ಗಜಯೋಧ
ರೊಡಗೂಡಿ ಬೆಂಕಿಯಲಿ ಬೀಳುವಂತವರು. ॥ ೩೦ ॥

---

*ಆಕ್ರಾಂತಾ ಗುರುಭಿರ್ಧರಾಧರವರೈಃ ಸಂಕ್ಷೇಪಿತೈಃ ಪಾರ್ಥಿವೈ ।
ಭೂರ್ಮಿಶ್ಚಾಗತ ಸಂಭ್ರಮೇವ ಯುವತಿಸ್ತಸ್ಮಿನ್ ಕ್ಷಣೇ ಕಂಪಿತಾ ॥

ಧೃತರಾಷ್ಟ್ರ — ಭೂಮಿಯಲಿ ಹೊಕ್ಕಿರಲಿ, ಗಗನವನೆ ಹತ್ತಿರಲಿ,
ಕೃಷ್ಣನೇ ಕಣ್ಣೆನಿಸಿದರ್ಜುನನ ಬಾಣಗಳು
ಎಲ್ಲ ಕಡೆಗೂ ಬಂದು ನುಗ್ಗುವುವು, ಬೆನ್ನ ಬಿಡವು ॥ ೩೧ ॥

ಭಟ — ಕ್ರೂರವಾಕ್ಯವನಿಂತು ಮತ್ತಾವನಾದರೂ
ನುಡಿಯಲಾಕ್ಷಣದಲೇ ಹರಣಗಳ ತೊರೆಯುವನು.
ತಪ್ಪಿಗನುಗುಣವಾದ ದಂಡವನು ಹಿಡಿದಿರುವ
ದೊರೆಯನಿಂತಾಡಿದರೆ ಬದುಕನವನು. ॥ ೩೨ ॥

(ಬಳಿಕ ಘಟೋತ್ಕಚನು ಪ್ರವೇಶಿಸುತ್ತಾನೆ)

ಘಟೋತ್ಕಚ — ಅಯ್ಯಾ, ನಾನು,

ಅಭಿಮನ್ಯುವಿನ ಕೊಲೆಯ ಮಾಡಿಸಿದ ವೈರಿಯನು,
ಆ ಅನಾರ್ಯನನಿಂದು ನೋಡಲೆಂದೈದುವೆನು
ಆನೆಯಂಕುಶದಂಕೆಗೊಳಪಟ್ಟು ನಡೆವಂತೆ
ಚಕ್ರಧರನಾಣತಿಯ ನೆನೆಯುತ್ತ ನಡೆಯುತಿಹೆನು. ॥ ೩೩ ॥

(ಕೆಳಗೆ ನೋಡಿ) ಇದು ಶತ್ರುಶಿಬಿರದ ಒಳಕ್ಕೆ ಹೋಗುವ ಹೆಬ್ಬಾಗಿಲ ಮುಂಭಾಗ. ಕೆಳಗಿಳಿಯೋಣ. (ಇಳಿದು) ನಾನು ಯಾರೆಂಬುದನ್ನು ನಾನೇ ತಿಳಿಸಿಬಿಡುತ್ತೇನೆ

ಆ ಹಿಡಿಂಬಾಸುತ ಘಟೋತ್ಕಚನು ಬಂದಿಹೆನು.
ಯದುಪತಿಯ ಮಾತುಗಳ ತಂದಿಹೆನು ಅಜ್ಜನನು
ಕಾಣಬೇಕಾಗಿಹುದು ತನ್ನ ದೋಷಗಳಿಂದ
ಶತ್ರುವಾಗಿಹ ಗುರುವ ನೋಡಬೇಕಿಂದು.

ದುರ್ಯೋಧನ — ಬಾ, ಬೇಗ ಬಾ, ನಿನ್ನ ಶತ್ರುವಿನ ಮಂದಿರಕೆ.
ಹೆಚ್ಚಿನ ಕುತೂಹಲವು ನನಗಿಹುದು. ಧೈರ್ಯದಲಿ
ಹೇಳೆನಗೆ ಆ ಜನಾರ್ದನನೊರೆದ ನುಡಿಗಳನು.
ನಾನೆ ದುರ್ಯೋಧನನು ; ಬಂದು ನಿಂದಿಹೆನು. ॥ ೩೪ ॥

ಘಟೋತ್ಕಚ— ಇಗೋ, ಈತನೇ ಪೂಜ್ಯನಾದ ಧೃತರಾಷ್ಟ್ರನು. ಇವನ ಆಕಾರವು ಎಷ್ಟು ಲಲಿತವಾಗಿ ಗಂಭೀರವಾಗಿ ಸೊಗಸುತ್ತಿರುವುದು ! ಆಶ್ಚರ್ಯ ! ಆಶ್ಚರ್ಯ !!

ಮುದುಕ ತಾನಾದರೂ ಸುಕ್ಕುಗಳು ಬಂದಿಲ್ಲ.
ನೂರುಮಕ್ಕಳ ಪಡೆದು, *ರೂಪವಚ್ಚಳಿಯದಿದೆ
ಸ್ವರ್ಗ ರಕ್ಷಣೆಗಾಗಿ ಹೆದರಿ ಸಂಶಯಗೊಂಡು
ಸುರರಿವನ ಕಣ್ಣುಗಳ ಮುಚ್ಚಿದರೊ ಏನೋ ॥ ೩೫ ॥

ಅಜ್ಜ, ವಂದಿಸುತ್ತೇನೆ, ಘಟೋತ್ಕ.... ... .....ಅಲ್ಲ, ಅಲ್ಲ. ಯುಧಿಷ್ಠಿರನೇ ಮೊದಲಾದ ನನ್ನ ಗುರುಗಳು ನಿನ್ನನ್ನು ವಂದಿಸುತ್ತಾರೆ. ಬಳಿಕ ನಾನು ಘಟೋತ್ಕಚನು ವಂದಿಸುತ್ತೇನೆ.

ಧೃತರಾಷ್ಟ್ರ — ಬಾ, ಮಗುವೇ, ಬಾ.

ಸೊಗದ ಸುದ್ದಿಯಿದಲ್ಲ. ಸೋದರನ ಸಾವಿನಲಿ
ನಿನಗೆಷ್ಟು ಸಂಕಟವೊ ಅಷ್ಟೆ ಸಂಕಟವೆನಗೆ.
ನನಗಿದಪ್ರಿಯವೆಂಬ ಸಂಗತಿಯನೀನರಿಯೆ
ಮಕ್ಕಳಪರಾಧದಿಂದೆನಗಿಂತು ಕಾರ್ಪಣ್ಯವಾಯ್ತು. ॥ ೩೬ ॥

ಘಟೋತ್ಕಚ — ಆಹಾ, ಪೂಜ್ಯರಾದ ನೀವು ಬಹಳ ಒಳ್ಳೆಯ ಮನಸ್ಸುಳ್ಳವರು ಕಲ್ಯಾಣಗಳಿಗೆ ಉತ್ಪತ್ತಿ ಸ್ಥಾನವಾಗಿರುವ ಪಿತಾಮಹನಿಗೆ ಭಗವಂತನಾದ ಚಕ್ರಾಯುಧನು ಹೀಗೆ ಹೇಳಿರುವನು.

ಧೃತರಾಷ್ಟ್ರ — (ಪೀಠವನ್ನು ಬಿಟ್ಟಿದ್ದು) ಭಗವಂತನಾದ ಚಕ್ರಾಯುಧನು ಏನು ಅಪ್ಪಣೆ ಮಾಡುತ್ತಾನೆ ?

ಘಟೋತ್ಕಚ — ಬೇಡ, ಬೇಡ, ಬೇಡ. ಪೀಠದ ಮೇಲೆ ಕುಳಿತುಕೊಂಡೇ ತಾವು ಜನಾರ್ದನನ ಸಂದೇಶವನ್ನು ಕೇಳಬೇಕು.

ಧೃತರಾಷ್ಟ್ರ — ಭಗವಂತನಾದ ಚಕ್ರಾಯುಧನು ಆಜ್ಞೆ ಮಾಡಿದಂತಾಗಲಿ.

---

*ಶ್ರದ್ಧೇಯ ರೂಪ ಇವ ಪುತ್ರಶತಸ್ಯ ಧೃತ್ವಾ.

(ಕುಳಿತುಕೊಳ್ಳುತ್ತಾನೆ)

ಘಟೋತ್ಕಚ — ಪಿತಾಮಹಾ, ಕೇಳಬೇಕು — "ಹಾ ವತ್ಸ, ಅಭಿಮನ್ಯು ! ಹಾ ವತ್ಸ, ಕುರುಕುಲಪ್ರದೀಪ ! ಹಾ ವತ್ಸ, ಯದುಕುಲಪ್ರವಾಲ ! ನಿಮ್ಮ ತಾಯಿಯ ಅಣ್ಣನಾದ ಜನಾರ್ದನನನ್ನೂ ನನ್ನನ್ನೂ ತೊರೆದು ಬಿಟ್ಟು ಅಜ್ಜನನ್ನು ನೋಡುವ ಆಸೆಯಿಂದ ಸ್ವರ್ಗಕ್ಕೆ ಹೊರಟು ಹೋದೆಯಾ ?" (ಎಂದು ಅರ್ಜುನನು ಗೋಳಾಡಿದನು). ಪಿತಾಮಹ, ಇದ್ದ ಒಬ್ಬನೇ ಒಬ್ಬ ಮಗನನ್ನು ಕಳೆದುಕೊಂಡದ್ದರಿಂದ ಅರ್ಜುನನ ಅವಸ್ಥೆಯೇ ಹೀಗಾಗಿರುವಲ್ಲಿ, ನಿನ್ನ ಅವಸ್ಥೆಯಿನ್ನೇನಾದಿತೋ ! ಆದ್ದರಿಂದ ಪುತ್ರಶೋಕದಿಂದ ಹುಟ್ಟಿದ ಬೆಂಕಿಯು ನಿನ್ನ ಪ್ರಾಣವೆಂಬ ಹವಿಯನ್ನು ಸುಡದಿರುವ ಹಾಗೆ ಈಗಲೇ ಬೇಗನೆ ನಿನ್ನ ಬಲವನ್ನೆಲ್ಲ ಒಟ್ಟುಗೂಡಿಸಿಕೊ." ಎಂದು ಹೇಳಿಕಳುಹಿಸಿರುವನು.

ಧೃತರಾಷ್ಟ್ರ — ಕ್ರೋಧ ಕಾರ್ಯದಿ ತೊಡಗಿ ಕೃಷ್ಣನಿಂತಾಡಿದನು.
ಪಾರ್ಥನಾ ಕ್ಷತ್ರಿಯರನೆಲ್ಲರನು ಕೊಲ್ಲದಿರನು. ॥ ೩೭ ॥

ದುರ್ಯೋಧನ — ಆಹಾ, ಈ ಮಾತನ್ನು ಕೇಳಿದರೆ ನಗು ಬರುತ್ತದೆ.

ಘಟೋತ್ಕಚ — ಏನು, ಇದು ನಗೆಗೀಡಾಯಿತೋ ?

ದುರ್ಯೋಧನ — ಹೌದು, ಇದು ನಗೆಗೀಡಾಯಿತು.

ಪಾರ್ಥನೊಬ್ಬನೆ ರಾಜಮಂಡಲವನೆಲ್ಲವನು
ಕೊಲ್ವನೆಂಬಾ ಕೃಷ್ಣ ತಾನು ಮತ್ಸರಗೊಂಡು
ದೇವತೆಗಳೊಡಗೂಡಿ ಮಂತ್ರಿಸುವನೇನೋ ! ॥ ೩೮ ॥

ಘಟೋತ್ಕಚ — ನುಡಿವವನು ನಾನೆನ್ನ ಚಕ್ರಧರನಟ್ಟಿದನು.
ತಿಳಿಸಿರುವೆನೀ ಪಾರ್ಥ ಕರ್ಮವನು. ಕೇಳಿ ನೀ
ನಗುತಿರುವೆ ! ಅಬ್ಬಬ್ಬ ! ತಕ್ಕುದಿದು ನಿನಗೆ. ॥ ೩೯ ॥

ಇದಲ್ಲದೆ ನೀನು ಕೂಡ ಜನಾರ್ದನನ ಸಂದೇಶವನ್ನು ಕೇಳಬೇಕು.

ದುಶ್ಶಾಸನ — ಎಲಾ ಕ್ಷತ್ರಿಯಾಪಮಾನಿಯೇ, ಹಾಗೆನ್ನಬೇಡ.

ಯಾರ ಶಾಸನವನೀ ಧರೆಯ ಪಾರ್ಥಿವರೆಲ್ಲ
ಧರಿಸುವರೊ, ಆತನಿಗೆ, ರಾಜನೂ ಅಲ್ಲದವ
ನಾವನೋ ಮತ್ತೊಬ್ಬ ಸಂದೇಶವೊರೆವನಂತೆ ! ॥ ೪೦ ॥

ಘಟೋತ್ಕಚ — ಏನು, ಏನು ? ಚಕ್ರಾಯುಧನು ನಿಮಗೆ ರಾಜನಲ್ಲವಾಗಿ ಬಿಟ್ಟನೋ ! ಹುಂ, ಇರಲಿ.

ಮಾನಮಹಿಮೆಗಳುರುಳಿ ನರಳಿದ ಜರಾಸಂಧ
ನಗರಿಯಾ ಸೆರೆಮನೆಯ ದೊರೆಗಳನು ಬಿಡಿಸಿದನು.
ನೃಪಮಂಡಲದ ಮುಂದೆ ಭೀಷ್ಮಾಗ್ರಹಸ್ತದಿಂ
ದರ್ಘ್ಯವನು ಪಡೆದಿಹನು. ಶ್ರೀವತ್ಸವೆಂದೆಂಬ
ಸೆಜ್ಜೆವನೆಯಲಿ ನೆಲೆಸಿ ಲಕ್ಷ್ಮಿಯಿವನೊಲಿದಿಹಳು ;
ಆಜ್ಞೆಯನು ಪಾಲಿಸುವಳಿಂತು ಕೀರ್ತಿಯನಾಂತು
ಮೆರೆವ ಚಕ್ರಾಯುಧನು ಪಾರ್ಥಿವರ ಪಾರ್ಥಿವನು.
ನಿಮಗೆ ರಾಜನು ತಾನದಲ್ಲವೆಂತೋ ! ॥ ೪೧ ॥

ದುರ್ಯೋಧನ — ದುಶ್ಶಾಸನ, ಬೇಡ, ಬೇಡ, ವಿವಾದವು ಬೇಡ.

ದೊರೆಯೊ, ದೊರೆಯಲ್ಲವೋ, ಬಲಿಯೊ, ಬಲಿಯಲ್ಲವೋ,
ಹೆಚ್ಚಾಡಿ ಫಲವಿಲ್ಲ. ನಿಮ್ಮ ಪ್ರಭುವೆಂದುದೇನು ? ॥ ೪೨ ॥

ಘಟೋತ್ಕಚ — ಸಂದೇಹವೇನು ? ಸಂದೇಹವೇನು ? ಮೂರು ಲೋಕಕ್ಕೂ ಒಡೆಯನಾಗಿರುವ ಪೂಜ್ಯನಾದ ನಾರಾಯಣನು ಪ್ರಭುವೇ ಸರಿ ; ನಮಗಂತೂ ಮುಖ್ಯವಾಗಿ ಆತನೇ ಪ್ರಭುವು. ಮತ್ತೇನೆಂದರೆ—

"ಕ್ಷತ್ರಿಯರ ನಾಶವದು ಸಿದ್ಧವಾಯ್ತೆಂದೆಣಿಸು.
ನೂರಾರು ನೃಪರುರುಳಿ ಹಗುರವಾಗಲಿ ಧರೆಗೆ.
ಮಗನಳಿವಿನಿಂದೆತ್ತಿದುಗ್ರಾಸ್ತ್ರಗಳ ಸುರಿವ
ಫಲ್ಗುನಗೆ ಸಮರದಲದಾವನೂ ಮಿಗಿಲೆನಿಸನು." ॥ ೪೩ ॥

ಶಕುನಿ — ಬರಿಮಾತಿನಿಂದಲೇ ಧರಣಿಯನು ಜಯಿಸುವೊಡೆ !
ಮಾತು ಮಾತಿಗೆ ಸರ್ವ ಕ್ಷತ್ರವಧೆಯಾಗುವೊಡೆ ! ॥ ೪೪ ॥

ಘಟೋತ್ಕಚ — ಎಲ ಎಲಾ, ಶಕುನಿಯು ಮಾತೆತ್ತಿದನು ! ಎಲಾ ಶಕುನಿ,

ದಾಳಗಳ ಬಿಸುಡತ್ತ. ಸಮರ ಕರ್ಮಕೆ ತಕ್ಕ
ಬಾಣಗಳಿಗೊಪ್ಪುವಂತಷ್ಟಾಪದವರಚಿಸು.
ದಾರಹರಣವಿದಲ್ಲ, ರಾಜ್ಯತಂತ್ರವದಿಲ್ಲ ;
ಪ್ರಾಣಗಳೆ ಪಣವಿಲ್ಲಿ, ಉಗ್ರಫಲಗಳನೀವ
ಬಾಣಗಳೆ ಹುರುಡಿಸುವ ಕಾರಣಗಳಿಲ್ಲಿ. || ೪೫ ||

ದುಶ್ಶಾಸನ — ಎಲ ಎಲಾ, ಎಂದು ನುಡಿದು,

ನಿಂದಿಸುವೆ. ರೂಕ್ಷವನು ನುಡಿಯುತಿಹೆ, ಮಿತಿಮಿರಿ.
ಏನನೂ ಲೆಕ್ಕಿಸದೆ ಕೈನೀಡಿ ಗಳಹುತಿಹೆ.
ನಿನ್ನ ದರ್ಪವು ಮಾತೃಪಕ್ಷದಂತುಗ್ರವಿರೆ,
ರೌದ್ರರಾವೂ ಹೌದು ; ರಾಕ್ಷಸರಿಗೆಣೆಯುನಿಸು
ವುಗ್ರಸ್ವಭಾವದವರು. || ೪೬ ||

ಘಟೋತ್ಕಚ — ಶಾಂತಂ, ಶಾಂತಂ ಪಾಪಂ ರಾಕ್ಷಸರಿಗಿಂತಲೂ ನೀವೇ
ಕ್ರೂರತಮರು. ಏಕೆಂದರೆ,

ಅರಗಿನರಮನೆಯಲ್ಲಿ ಮೈಮರೆತು ಮಲಗಿರುವ
ಸೋದರರನೆಂದಿಗೂ ಸುಡರಯ್ಯ ರಾಕ್ಷಸರು.
ಆ ಪರಿಯುಲೆಂದಿಗೂ ಸೋದರರ ಮಡದಿಯರ
ಮುಡಿಯ ಮುಟ್ಟರು ಕೇಳು ರಾಕ್ಷಸರು. ಯುದ್ಧದಲಿ
ಸುತವಧೆಯುನೆಂದಿಗೂ ಸ್ಮರಿಸರೈ ರಾಕ್ಷಸರು.
ವಿಕೃತ ರೂಪಿಗಳವರು, ನಡತೆಯುಗ್ರವು ಹೌದು ;
ದಯೆಯನಿನಿತೂ ತೊರೆದುದಿಲ್ಲವವರು. || ೪೭ ||

ದುರ್ಯೋಧನ — ದೂತನಂತಿಲ್ಲಿ ನೀ ಬಂದಿರುವೆ. ಕದನಕ್ಕೆ

ಬಂದಿಲ್ಲ. ಸಂದೇಶವನು ಕೊಂಡು ಹಿಂದಿರುಗು
ದೂತಘಾತಕರಲ್ಲ ಕೇಳು ನಾವು. || ೪೮ ||

ಘಟೋತ್ಕಚ — ಏನು, ಏನು ? ದೂತನೆಂದು ನನ್ನನ್ನು ಹೆದರಿಸುತ್ತೀಯೋ?
ಬೇಡ, ಹಾಗಾದರೆ, ನಾನು ದೂತನೇ ಅಲ್ಲ.

ಸಾಕು ನಿಮ್ಮ ಯತ್ನ. ಒಂದಾಗಿ ಬಂದೆನ್ನ
ಹೊಡೆಯಿರಿದೊ ನಿಂದಿಹೆನು. ಬಿಲ್ಲ ಹೆದೆ ಕತ್ತರಿಸೆ
ಬಲವುಡುಗಿದಭಿಮನ್ಯುವಲ್ಲ ನಾನು. || ೪೯ ||

ಇದು ನನಗೆ ಚಿಕ್ಕಂದಿನಿಂದಲೂ ಇದ್ದ ಮಹತ್ತಾದ ಆಸೆ. ಮತ್ತೇನೆಂದರೆ,

ಹಲ್ಲುಮುಡಿಯನು ಕಚ್ಚಿ ಮುಷ್ಟಿಯನು ಬಿಗಿಹಿಡಿದು
ನಿಂತೆನು ಘಟೋತ್ಕಚನು. ಎದ್ದೇಳಿ ಗಂಡಸರು,
ಯಮಲೋಕದೆಡೆಗೆ ನಡೆವಾಸೆಯುಳ್ಳವರು. || ೫೦ ||

ಧೃತರಾಷ್ಟ್ರ — ಪೌತ್ರ, ಘಟೋತ್ಕಚ, ತಾಳಿಕೊಳ್ಳಪ್ಪಾ, ತಾಳಿಕೊ. ನನ್ನ ಮಾತುಗಳನ್ನು ಕೇಳು.

ಘಟೋತ್ಕಚ — ರೋಷವನ್ನು ತಡೆದುಕೊಳ್ಳುವುದಕ್ಕೆ ನನ್ನಿಂದಾಗದು. ಹಾಗಾದರೂ ಅಜ್ಜನ ಮಾತಿನಂತೆ ದೂತನೇ ಆಗಿದ್ದೇನೆ. ಪೂಜ್ಯನಾದ ನಾರಾಯಣನಿಗೆ ಏನೆಂದು ವಿಜ್ಞಾಪಿಸಬೇಕು?

ದುರ್ಯೋಧನ — ಆಃ! ಯಾರು ವಿಜ್ಞಾಪಿಸಬೇಕು? ನನ್ನ ಮಾತಿನಿಂದ ಅವನಿಗೆ ಹೀಗೆ ಹೇಳು:

"ಬರಿದೆಯೇತಕೆ ಬಹಳ ಮಾತಾಡುತಿಹೆ? ನಿನ್ನ
ಪೌರುಷಕೆ ಸಗ್ಗುವರು ನಾವಲ್ಲ. ಬಹುದೂರ
ಮಾತಾಡಲನುಚಿತವು. ಯುದ್ಧವೇ ನುಡಿಗೊಡುವುದು
ನೂರಾರು ನೃಪರೆನ್ನ ಸುತ್ತ ಬರೆ ಛತ್ರಗಳ
ಮಾಲೆಗಳ ಮಧ್ಯದಲಿ ನಡೆಯುವೆನು. ನೀನಲ್ಲಿ
ಪಾಂಡವರ ಬಳಿ ನಿಲ್ಲು. ನಿನಗೆ ಪ್ರತ್ಯುತ್ತರವ
ಬಾಣಗಳ ಸಂಗಡವೆ ಕೊಟ್ಟು ಕಳುಹುವೆನು." || ೫೧ ||

ಘಟೋತ್ಕಚ — ಅಜ್ಜ, ಇಗೋ ಹೋಗುತ್ತೇನೆ.

ಧೃತರಾಷ್ಟ್ರ — ಪೌತ್ರ, ಹೋಗು, ಹೋಗು.

ಘಟೋತ್ಕಚ — ಎಲೆ ಎಲೈ ರಾಜರೆ, ಜನಾರ್ದನನ ಕಟ್ಟಕಡೆಯ ಸಂದೇಶವನ್ನು ಕೇಳಿ:

ಆಚರಿಸು ಧರ್ಮವನು ಸ್ವಜನರಲಿ ಪ್ರೀತಿಯನು
ತೋರು. ಮನದಿಷ್ಟಾರ್ಥವೇನಿಹುದೊ ಅದನೆಲ್ಲ
ಈಗಲೇ ಮುಗಿಸಿಬಿಡು. *ಜಾತಿಗುಪದೇಶದೊಲು
ಪಾಂಡವನ ರೂಪವನು ಧರಿಸಿ ನಿಮ್ಮಾಯಮನು
ಸೂರ್ಯಕಿರಣಗಳೊಡನೆ ನಿಮ್ಮೆಡೆಗೆ ಬರುವನೊಲಿದು ||೫೭||

(ಎಲ್ಲರೂ ಹೋಗುತ್ತಾರೆ)

ದೂತ ಘಟೋತ್ಕಚವು ಮುಗಿಯಿತು

---

*ಜಾತ್ಯೋಪದೇಶ ಇವ.

## ಪಾತ್ರಗಳು

ಸೂತ್ರಧಾರ
ಕರ್ಣ
ಶಲ್ಯ
ಶಕ್ರ
ದೇವದೂತ
ಭಟ

---

# ಕರ್ಣಭಾರ



(ನಾಂದಿಯಾದ ಮೇಲೆ ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

ಸೂತ್ರಧಾರ — ನರಸಿಂಹರೂಪಾವಲೋಕನದಿ ಪಾತಾಳ
ಮೊದಲಾದ ಲೋಕಗಳ ದೇವ ದನುಜರ, ನರರ,
ನಾರಿಯರ ಗಡಣಗಳು ಬೆದರಿ ನಡುಗುತಲಿರಲು
ಕೈಯುಗುರ ಮೊನೆಯೆಂಬ ಕುಲಿಶದಲಿ ದೈತ್ಯೇಂದ್ರ
ನೆದೆಯ ಭೇದಿಸಿದವನು, ಸುರರಿಪುಗಳುರುಬಲವ
ಸವರುವಾ ಶ್ರೀಧರನು ಪಾಲಿಸಲಿ ಸಿರಿಯ ನಿಮಗೆ ॥ ೧ ॥

ಆರ್ಯ ಮಹಾಶಯರಲ್ಲಿ ವಿಜ್ಞಾಪನೆ. ಓಹೋ, ನಾನು ವಿಜ್ಞಾಪಿಸುವುದರಲ್ಲಿ ತೊಡಗಿರುವಾಗಲೇ ಗದ್ದಲವಾಗುವ ಹಾಗೆ ಕೇಳಿಸುವುದಲ್ಲ. ಇರಲಿ, ನೋಡೋಣ

(ತೆರೆಯಲ್ಲಿ)

ಅಯ್ಯಾ, ಅಯ್ಯಾ ವಿಜ್ಞಾಪಿಸಿರಿ, ವಿಜ್ಞಾಪಿಸಿರಿ. ಮಹಾರಾಜನಾದ ಅಂಗೇಶ್ವರನಿಗೆ ವಿಜ್ಞಾಪಿಸಿರಿ.

ಸೂತ್ರಧಾರ — ಆಗಲಿ, ತಿಳಿಯಿತು.

ತುಮುಲ ಸಂಗ್ರಾಮ ಸಂಭವಿಸಿರಲು ಸೇವಕನು
ದುರ್ಯೋಧನಾಜ್ಞೆಯಲಿ ಕರ್ಣನೆಡೆಗೈತಂದು
ಕೈಮುಗಿದು ನಡುಗಿ ಬಿನ್ನೈಸುತಿಹನು. ॥ ೨ ॥

(ಹೊರಡುತ್ತಾನೆ)

ಪ್ರಸ್ತಾವನೆ ಮುಗಿಯಿತು.



(ಬಳಿಕ ಭಟನು ಪ್ರವೇಶಿಸುತ್ತಾನೆ)

ಭಟ — ಆಯ್ಯಾ, ಆಯ್ಯಾ, ವಿಜ್ಞಾಪಿಸಿರಿ, ವಿಜ್ಞಾಪಿಸಿರಿ. ಯುದ್ಧಕಾಲವು ಒದಗಿರುವುದೆಂದು ಮಹಾರಾಜನಾದ ಅಂಗೇಶ್ವರನಿಗೆ ವಿಜ್ಞಾಪಿಸಿರಿ.

ಕರಿ ತುರಗ ರಥವೇರಿ, ಮುದವೇರೆ ನೃಪಸಿಂಹ
ರೀಗ ಪಾರ್ಥನ ಮುಂದೆ ಸಿಂಹನಾದವ ಗೈದ
ರರಿಗಳಾರ್ಭಟದಿಂದ ಸಹಿಸಲಸದಳವಾದ
ಸಮರ ಭೂಮಿಗೆ ಲೋಕವೀರನೆನಿಸುವ ನಮ್ಮ
ನಾಗಕೇತುವು ಹೊರಟು ನಿಂದಿಹನು ತ್ವರಿತದಿಂದ. ॥ ೩ ॥

(ಮುಂದೆ ಹೋಗಿ, ನೋಡಿ) ಇಗೋ, ಈ ಅಂಗರಾಜನು ಯುದ್ಧ ದುಡಿಗೆಗಳನ್ನುಟ್ಟು, ಶಲ್ಯರಾಜನೊಡಗೂಡಿ ತನ್ನ ಮನೆಯಿಂದ ಹೊರ ಹೊರಟು ಇತ್ತಕಡೆಗೇ ಬರುತ್ತಿರುವನು. ಆಃ! ಯುದ್ಧೋತ್ಸವದಲ್ಲಿ ಪ್ರಮುಖನಾಗಿಯೂ, ಪರಾಕ್ರಮವನ್ನು ಮೆರೆದವನಾಗಿಯೂ ಇರುವ ಈತನಿಗೆ ಏನೋ ಒಂದು ಬಗೆಯ ಹೃದಯ ಪರಿತಾಪವಿರುವಂತೆ ತೋರುವುದು. ಹಿಂದೆಂದೂ ಕಾಣದಿದ್ದ ಈ ಪರಿತಾಪವು ಏನಿರಬಹುದು! ಇವನಾದರೋ,

ಅತ್ಯುಗ್ರದೀಪ್ತಿಯಲಿ ಬೆಳಗುವನು, ಸಮರದೊಳ
ಗಗ್ರಗಣ್ಯನು, ಶೌರ್ಯದುಬ್ಬಿನಲಿ ಮೊದಲಿಗನು,
ಧೀಮಂತನಿವನಿಂದು ಶೋಕದಲಿ ಬರುತಿಹನು.
ಬೇಸಗೆಯ ಕಾಲದಲಿ ಘನರಾಶಿ ಮುಸುಕಿರುವ
ನೈಜಕಾಂತಿಯ ಸೂರ್ಯನಂತೆಸೆವನೀ ಕರ್ಣನು ॥ ೪ ॥

ಇನ್ನು ನಾನು ಹೊರಟು ಹೋಗುತ್ತೇನೆ. (ಹೋಗುತ್ತಾನೆ)

(ಬಳಿಕ ಮೇಲೆ ಹೇಳಿದಂತಿರುವ ಕರ್ಣನೂ ಶಲ್ಯನೂ ಪ್ರವೇಶಿಸುತ್ತಾರೆ)

ಕರ್ಣ — ನನ್ನ ಬಾಣದ ಗುರಿಗೆ ಸಿಲುಕಿದಾ ದೊರೆಗಳಲ
ದಾರು ಜೀವವನುಳಿಸಿ ಬದುಕಿಬಂದರು ಹೇಳು.

ಆ ಧನಂಜಯನೆನಗೆ ಕಂಡುಬರೆ ಕದನದಲಿ
ಕುರುಗಳಿಗೆ ಪ್ರಿಯವನೇ ಸಾಧಿಸುವೆ ನಾನು. ॥ ೫ ॥

ಶಲ್ಯರಾಜ, ಅರ್ಜುನನೆಲ್ಲಿರುವನೋ ಅಲ್ಲಿಗೇ ನನ್ನ ರಥವನ್ನು ನಡಸು.

ಶಲ್ಯ — ಆಗಲಿ. (ರಥವನ್ನು ನಡಸುತ್ತಾನೆ)

ಕರ್ಣ — ಆಹಹಾ !

ಅನ್ಯೋನ್ಯ ಶಸ್ತ್ರಗಳ ಕಡಿತದಲಿ ಕತ್ತರಿಸಿ
ಕೆಡೆದ ರಥಯೌಧಾಶ್ವವಾರಣಗಳಿಂದಿಡಿದ
ಸಂಗ್ರಾಮ ಭೂಮಿಗಳ ಮಧ್ಯದಲಿ ಖತಿಗೊಂಡ
ಯಮನಂತೆ ವಿಕ್ರಮವ ಬೀರುತ್ತ ನಿಂದೆನಗು
ಯುದ್ಧಕಾಲದಲಿಂದು ಮನವಳುಕುತಿಹುದು. ॥ ೬ ॥

ಅಯ್ಯೋ ಕಷ್ಟ !

ಕುಂತಿಯಲಿ ಮೊದಲು ನಾನುದಿಸಿದೆನು. ರಾಧೇಯ
ನೆಂದೆನಗೆ ಹೆಸರಾಯ್ತು. ತಮ್ಮಂದಿರೆನಗವರು,
ಆ ಯುಧಿಷ್ಠಿರ ಮುಖ್ಯಪಾಂಡುಸುತರು. ॥ ೭ ॥

*ಕಮ್ರದಿಂದ ಲಭಿಸಿದಾ ಶೋಭನದ ಕಾಲವಿದು.
ಅಧಿಕ ಗುಣಗಳ ತಳೆದ ದಿನವಿಂದು ಬಂದಿಹುದು.
ಅಸ್ತ್ರಗಳನರಿತರೂ ನೆರೆ ನಿರರ್ಥಕವಾಯ್ತು.
ತಾಯ ಮಾತಿನ ತಡೆಯು ಮತ್ತೆನಗೆ ಬಂದೊದಗಿತು. ॥ ೮ ॥

ಅಯ್ಯಾ ಮದ್ರರಾಜ, ನನ್ನ ಅಸ್ತ್ರದ ವೃತ್ತಾಂತವನ್ನು ಕೇಳು.

ಶಲ್ಯ — ಈ ವೃತ್ತಾಂತವನ್ನು ಕೇಳುವುದಕ್ಕೆ ನನಗೂ ಕುತೂಹಲವುಂಟು.

ಕರ್ಣ — ಹಿಂದೆಯೇ ನಾನು ಜಮದಗ್ನಿಪುತ್ರನ ಸಮೀಪಕ್ಕೆ ಹೋದೆನು.

ಶಲ್ಯ — ಆಮೇಲಾಮೇಲೆ ?

---

*ಅಯಂ ಸ ಕಾಲಃ ಕ್ರಮುಲಬ್ಧ ಶೋಭನಃ

ಕರ್ಣ — ಆಮೇಲೆ,

ಮಿಂಚುಬಳ್ಳಿಯ ಹಾಗೆ ಹೊಂಬಣ್ಣದಲಿ ಹೊಳೆವ
ಜಡೆಯ ಗಡಣವ ತಳೆದು, ಮೇಲುಕ್ಕಿ ಸುತ್ತಿರುವ
ಹೊಗರಿಂದ ರಂಜಿಸುವ ಗಂಡುಗೊಡಲಿಯನಾಂತು,
ಕ್ಷತ್ರಿಯಾಂತಕನಾಗಿ, ಭೃಗುಕುಲಧ್ವಜನಾಗಿ
ಮೆರೆವ ಮುನಿವರನೆಡೆಗೆ, ಏಕಾಂತ ಸಮಯದಲಿ
ನಡೆದು ನಾನಡಿಗೆರಗಿ ಬಳಿಯಲೇ ನಿಂದೆನಲ್ಲಿ. ॥ ೯ ॥

ಶಲ್ಯ — ಆಮೇಲಾಮೇಲೆ ?

ಕರ್ಣ — ಆಮೇಲೆ ಆ ಜಮದಗ್ನಿಪುತ್ರನು ನನಗೆ ಆಶೀರ್ವಾದ ಮಾಡಿ "ನೀನು ಯಾರು ? ಇಲ್ಲಿಗೇಕೆ ಬಂದೆ ?" ಎಂದು ಕೇಳಿದನು.

ಶಲ್ಯ — ಆಮೇಲಾಮೇಲೆ ?

ಕರ್ಣ — "ಪೂಜ್ಯರೇ, ನಾನು ಸಮಸ್ತ ಅಸ್ತ್ರಗಳನ್ನೂ ಅಭ್ಯಾಸ ಮಾಡಿ ಕಲಿಯಬೇಕೆಂದು ಇಚ್ಛಿಸುತ್ತೇನೆ" ಎಂದು ಹೇಳಿದೆನು.

ಶಲ್ಯ — ಆಮೇಲಾಮೇಲೆ ?

ಕರ್ಣ — ಆಮೇಲೆ ಆ ಪೂಜ್ಯನು ನನ್ನನ್ನು ಕುರಿತು, "ನಾನು ಬ್ರಾಹ್ಮಣರಿಗೆ ಉಪದೇಶಮಾಡುತ್ತೇನೆ. ಕ್ಷತ್ರಿಯರಿಗೆ ಮಾಡುವುದಿಲ್ಲ" ಎಂದನು.

ಶಲ್ಯ — ಪೂಜ್ಯನಿಗೆ ಕ್ಷತ್ರಿಯ ವಂಶದಲ್ಲಿ ಹುಟ್ಟಿದವರೊಡನೆ ವೈರವಿರುವುದಷ್ಟೆ. ಆಮೇಲಾಮೇಲೆ ?

ಕರ್ಣ — ಆಮೇಲೆ ನಾನು ಕ್ಷತ್ರಿಯನಲ್ಲವೆಂದು ಹೇಳಿ ಅಸ್ತ್ರೋಪದೇಶವನ್ನು ಗ್ರಹಿಸಲು ಮೊದಲುಮಾಡಿದೆನು.

ಶಲ್ಯ — ಆಮೇಲಾಮೇಲೆ ?

ಕರ್ಣ — ಆಮೇಲೆ ಕೆಲವು ಕಾಲ ಕಳೆದ ಬಳಿಕ ಒಂದಾನೊಂದು ಸಮಯದಲ್ಲಿ ಫಲ, ಮೂಲ, ಸಮಿತ್ತು, ಕುಶ, ಕುಸುಮಗಳನ್ನು ತರುವುದಕ್ಕೋಸ್ಕರ ಗುರುಗಳು ಹೊರಡಲಾಗಿ ಅವರ ಜೊತೆಯಲ್ಲಿಯೇ

ಹಿಂಬಾಲಿಸಿ ಹೋದೆನು. ಆಮೇಲೆ ಆ ಗುರುಗಳು ಕಾಡಿನಲ್ಲಿ ಅಲೆದು ಬಳಲಿಕೆಯಿಂದ ನನ್ನ ತೊಡೆಯಲ್ಲಿ ನಿದ್ದೆಮಾಡಿಬಿಟ್ಟರು.

ಶಲ್ಯ — ಆಮೇಲಾಮೇಲೆ ?

ಕರ್ಣ — ಆಮೇಲೆ,

ದೈವಯೋಗದಲೆನ್ನ ತೊಡೆಗಳೆರಡನು ವಜ್ರ
ಮುಖವೆಂಬ ಕೃಮಿಯೊಂದು ಬಂದು ಕೊರೆಯಲು ಗುರುಗೆ
ನಿದ್ರೆ ತಿಳಿದೀತೆಂದು ಭಯಗೊಂಡು ಧೈರ್ಯದಿಂ
ದಾಗಳಾವೇದನೆಯ ಸಹಿಸಿದೆನು. ಹೊರಹರಿದ
ರಕ್ತದಲಿ ಮೈನೆನೆದು ಗುರು ತಟ್ಟನೆಚ್ಚತ್ತು
ನನ್ನ ನೆಲೆಯನು ತಿಳಿದು ರೋಷಾನಲಜ್ವಾಲೆ
ಯುರಿಯುತಿರಲಸ್ತ್ರಗಳು ನಿನಗಿವು ಸಕಾಲದಲಿ
ವಿಫಲವಾಗಲಿಯೆಂದು ಶಪಿಸಿದನು ಮುನಿಯು ಮುನಿದು. ॥೧೦॥

ಶಲ್ಯ — ಅಯ್ಯೋ, ಆ ಪೂಜ್ಯನು ಕಷ್ಟವನ್ನೇ ನುಡಿದುಬಿಟ್ಟನು.

ಕರ್ಣ — ಅಸ್ತ್ರದ ವೃತ್ತಾಂತವನ್ನು ಸ್ವಲ್ಪ ಪರೀಕ್ಷಿಸಿ ನೋಡೋಣ ! (ಹಾಗೆ ಮಾಡಿ) ಈ ಅಸ್ತ್ರಗಳೆಲ್ಲ ನಿರ್ವೀರ್ಯಗಳಾಗಿ ಕಾಣುತ್ತಿವೆ. ಇದೂ ಅಲ್ಲದೆ,

ದೈನ್ಯದಲಿ ಕಣ್ಮುಚ್ಚಿ ಮೈಮರೆಯುತಡಿಗಡಿಗೆ
ತಪ್ಪುಹೆಜ್ಜೆಯನ್ನಿಟ್ಟು ಜಾರುತಿವೆ ಕುದುರೆಗಳು.
ಆನೆಗಳೊ, ಕಟುಗಂಧ ದಾನವನು ಸುರಿಸುತಿವೆ.
ರಣದಲಿವು ಸೋಲ ಸೂಚಿಸುವಂತೆ ತೋರುತಿಹುದು. ॥ ೧೧ ॥

ಶಂಖ ದುಂದುಭಿಗಳು ಕೂಡ ನಿಶ್ಶಬ್ದವಾಗಿರುವುವು.

ಶಲ್ಯ — ಅಯ್ಯೋ ! ಇದೆಂಥ ಕಷ್ಟವೊದಗಿತು !

ಕರ್ಣ — ಶಲ್ಯರಾಜ, ವಿಷಾದಪಡಬೇಡ.

ಮಡಿದರೂ ಸ್ವರ್ಗವನೆ ಪಡೆಯುವನು. ಗೆದ್ದರೋ,
ಕೀರ್ತಿ ಕೈಸೇರುವುದು. ಲೋಕದೊಳಗೀಯೆರಡು
ಬಹುಮತವು. ರಣದಿ ನಿಷ್ಫಲತೆಯಿರದು. ॥ ೧೨ ॥

ಮತ್ತೇನೆಂದರೆ,

ಹಯಗಳಿವು ಯುದ್ಧದಲಿ ಹಿಂದಿರುಗವೆಂದಿಗೂ.
ವೇಗದಲಿ ಗರುಡನಿಗೆ ಸಾಟಿಯಿವು ; ವಿಖ್ಯಾತ
ಕಾಂಭೋಜಕುಲದೊಳಗೆ ಜನಿಸಿಹವು. ಕಾಪಿಡುವ
ವಸ್ತುವನು ರಕ್ಷಿಸದೆ ಬಿಡವಿವೆಂದೂ. ॥ ೧೩ ॥

ಗೋಬ್ರಾಹ್ಮಣರಿಗೆ ಅಕ್ಷಯವಾಗಲಿ ! ಪತಿವ್ರತೆಯರಿಗೆ ಅಕ್ಷಯ ವಾಗಲಿ ! ರಣದಲ್ಲಿ ಬೆನ್ನು ತೋರಿಸದ ಯೋಧಪುರುಷರಿಗೆ ಅಕ್ಷಯ ವಾಗಲಿ ! ಕಾಲವೊದಗಿ ಬಂದಿರುವ ನನಗೆ ಅಕ್ಷಯವಾಗಲಿ ! ಇಗೋ ಈಗ ಪ್ರಸನ್ನನಾಗಿದ್ದೇನೆ.

ಅಸದಳವಿದೆನಿಸಿದೀ ಪಾಂಡವರ ಸಮರಮುಖ
ದೊಳನುಗ್ಗಿ, ಪ್ರಥಿತಗುಣಗಣ ತುಂಬಿ ರಂಜಿಸುವ
ಧರ್ಮರಾಜನ ಕಟ್ಟಿ, ಬಾಣಗಳ ವೇಗದಿಂ
ದರ್ಜುನನನುರುಳಿಸುತ, ಸಿಂಹವನು ಕೊಂದಿಕ್ಕಿ
ವನವನೆಂತೋ ಅಂತೆ ಸುಪ್ರವೇಶವ ಗೈವೆನು. ॥ ೧೪ ॥

ಶಲ್ಯರಾಜ, ಇನ್ನು ರಥವನ್ನು ಹತ್ತೋಣ.

**ಶಲ್ಯ** — ಆಗಬಹುದು. (ಇಬ್ಬರೂ ರಥಾರೋಹಣವನ್ನು ನಟಿಸುತ್ತಾರೆ)

**ಕರ್ಣ** — ಶಲ್ಯರಾಜ, ಆ ಅರ್ಜುನನು ಎಲ್ಲಿರುವನೋ ಅಲ್ಲಿಗೇ ನನ್ನ ರಥವನ್ನು ನಡಸು.

(ತೆರೆಯಲ್ಲಿ)

ಅಯ್ಯಾ ಕರ್ಣ, ಮಹತ್ತರವಾದ ಭಿಕ್ಷವನ್ನು ಬೇಡುತ್ತೇನೆ.

**ಕರ್ಣ** — (ಆಲಿಸಿ) ಓಹೋ, ಶಬ್ದವು ವೀರ್ಯವತ್ತಾಗಿದೆ !

ಈ ನನ್ನ ಕುದುರೆಗಳು ಧೀರ ಮಧುರಸ್ವರವ
ಕೇಳಿ ಕಿವಿಗಳನೆತ್ತಿ, ಕಣ್ಣೆವೆಯನಲುಗಿಸದೆ,

ಕೊರಳ ಕೊಂಕಿಸುತಲ್ಲಿ ಮುಸುಡಿಯನು ತಂದಿಟ್ಟು,
ಅಂಗಗಳ ವಶ ತಪ್ಪಿ, ಚಿತ್ರದಲಿ ಬರೆದಂತೆ
ನಿಂತಿರುವುವಿಂತಿವನ ಮಹಿಮೆ ಮಿಗಿಲಾಗಿಹುದು.
ಕೇವಲ ದ್ವಿಜನಲ್ಲ; ಶ್ರೀಮಂತನಿವನು ನಿಜವು. ॥ ೧೫ ॥

ಆ ಬ್ರಾಹ್ಮಣನನ್ನು ಕರಸು. ಬೇಡ, ಬೇಡ, ನಾನೇ ಕರೆಯು ತ್ತೇನೆ. ಪೂಜ್ಯರೇ, ಇತ್ತ ಬರಬೇಕು, ಇತ್ತ ಬರಬೇಕು.

(ಬಳಿಕ ಬ್ರಾಹ್ಮಣರೂಪದಿಂದ ಶಕ್ರನು ಪ್ರವೇಶಿಸುತ್ತಾನೆ)

ಶಕ್ರ— ಎಲೈ ಮೇಘಗಳೇ, ನೀವೆಲ್ಲರೂ ಸೂರ್ಯನಿಂದಲೆಂಬಂತೆ ಹಿಂದಿರುಗಿ ಹೊರಟುಹೋಗಿ. (ಕರ್ಣನ ಸಮೀಪಕ್ಕೆ ಹೋಗಿ) ಅಯ್ಯಾ ಕರ್ಣ, ಮಹತ್ತರವಾದ ಭಿಕ್ಷವನ್ನು ಬೇಡುತ್ತೇನೆ.

ಕರ್ಣ— ಪೂಜ್ಯರೇ, ಬಹಳ ಸಂತೋಷವಾಯಿತು.
ನಾನಿಂದು ಧನ್ಯಾತ್ಮರೆಣಿಕೆಯಲಿ ಸಂದವನು.
ರಾಜೇಂದ್ರಮೌಳಿಮಣಿದೀಪ್ತಿಯಲಿ ರಂಜಿಸುವ
ಪಾದಪದ್ಮವನಾಂತು, ವಿಪ್ರೇಂದ್ರ ಪಾದರಜ
ದಿಂದ ಪಾವನವಾದ ಮೌಳಿಯನು ತಳೆದೆಸೆವ
ಕರ್ಣನಿದೋ ಪೂಜ್ಯರಡಿಗೆರಗುತಿಹೆನು. ॥ ೧೬ ॥

ಶಕ್ರ— (ತನ್ನಲ್ಲಿ ತಾನು) ನಾನು ಏನು ಹೇಳಲಿ? ದೀರ್ಘಾಯುವಾಗೆಂದು ಹೇಳಿದೆನಾದರೆ ದೀರ್ಘಾಯುವಾಗುತ್ತಾನೆ. ಹೇಳಲಿಲ್ಲವೋ, ಮೂಢನೆಂದು ನನ್ನನ್ನು ನಿರಾಕರಿಸುತ್ತಾನೆ. ಆದ್ದರಿಂದ ಈ ಎರಡನ್ನೂ ಬಿಟ್ಟು ಇನ್ನೇನು ತಾನೇ ಹೇಳಲಿ? ಆಗಲಿ. (ಪ್ರಕಾಶವಾಗಿ) ಅಯ್ಯಾ ಕರ್ಣ, ಸೂರ್ಯನ ಹಾಗೆ, ಹಿಮವಂತನ ಹಾಗೆ, ಸಾಗರದ ಹಾಗೆ ನಿನ್ನ ಯಶಸ್ಸು ನಿಂತಿರಲಿ.

ಕರ್ಣ— ಪೂಜ್ಯರೇ, ದೀರ್ಘಾಯುವಾಗೆಂದು ಹರಸಬಾರದೇ? ಅಥವಾ, ಇದೇ ಶೋಭನವಾಗಿದೆ. ಏಕೆಂದರೆ,

ವಿವಿಧ ಯತ್ನಗಳಿಂದ ಧರ್ಮವನೆ ಸಾಧಿಪುದು.
ಸರ್ಪ ಜಿಹ್ವೆಯ ಹಾಗೆ ಚಪಲವೀ ನೃಪಸಿರಿಯು.
*ಅದರಿಂದ ಪ್ರಜೆಯ ಪಾಲಿಸುವೊಂದು ಬುದ್ಧಿಯಲಿ
ದೇಹ ಮಡಿದಳಿದರೂ ಗುಣಗಳುಳಿಯುವುವು. ॥ ೧೭ ॥

ಪೂಜ್ಯರೇ, ನಿಮಗೆ ಯಾವುದರಲ್ಲಿ ಇಚ್ಛೆಯಿದೆ? ನಾನೇನು ಕೊಡಲಿ?

ಶಕ್ರ — ಮಹತ್ತರವಾದ ಭಿಕ್ಷವನ್ನು ಬೇಡುತ್ತೇನೆ.

ಕರ್ಣ — ಮಹತ್ತರವಾದ ಭಿಕ್ಷವನ್ನು ನಿಮಗೆ ಕೊಡುತ್ತೇನೆ. ನನ್ನ ವಿಭವಗಳನ್ನು ಕೇಳಿ :

ತೃಪ್ತಿಯಲಿ ನಲಿನಲಿವ ಕರುಗಳಿಂದೊಡಗೂಡಿ,
ಅಮೃತಕೆಣೆಯೆನಿಸುತಿಹ ಕ್ಷೀರಧಾರೆಯ ಕರೆಯು
ತರ್ಥಿಗಳು ಪ್ರಾರ್ಥಿಸಲು ತಕ್ಕುವೆನಿಸಿದ ತರುಣ
ಗೋಗಳಿವೆ. ದ್ವಿಜವರ್ಯ, ನಿಮಗೀ ಪವಿತ್ರವಹ
ಗೋಧನದಲಾಸೆಯಿರೆ, ಕನಕ ಶೃಂಗಗಳಿಡಿಸಿ
ಗೋಸಹಸ್ರವನೀವೆನು ॥ ೧೮ ॥

ಶಕ್ರ — ಗೋಸಹಸ್ರವನ್ನೇ? ಮುಹೂರ್ತಕಾಲ ಹಾಲು ಕುಡಿಯಬಹುದು. ಇಚ್ಛೆಯಿಲ್ಲ, ಕರ್ಣ, ಇಚ್ಛೆಯಿಲ್ಲ.

ಕರ್ಣ — ಏನು, ಪೂಜ್ಯರಿಗೆ ಇಚ್ಛೆಯಿಲ್ಲವೇ? ಇದನ್ನು ಕೇಳಿ :

ರವಿತುರಗಗಳಿಗೆ ಸರಿಸಾಟಿಯಿಾ ಕುದುರೆಗಳು.
ರಾಜಲಕ್ಷ್ಮಿಗೆ ತಕ್ಕ ಸಾಧನಗಳಖಿಲನೃಪ
ಮಾನ್ಯಗಳು, ಮಾನ್ಯ ಕಾಂಭೋಜದಲಿ ಜನಿಸಿದವು,
ಸುಗುಣಿಗಳು, ವಾಯುವೇಗದಿ ನುಗ್ಗಿ ನಡೆಯುವುವು,
ಯುದ್ಧದಲಿ ನಡಗೆಯನು ಮೆರೆದಿಹವು— ಈ ಪರಿಯ
ವಾಜಿಗಳ ಬಹು ಸಹಸ್ರವನೀವೆನು. ॥ ೧೯ ॥

*ತಸ್ಮಾತ್ ಪ್ರಜಾಪಾಲನ ಮಾತ್ರ ಬುದ್ಧ್ಯಾ।
ಹತೇಷು ದೇಹೇಷು ಗುಣಾ ಧರಂತೇ ॥

ಶಕ್ರ — ಅಶ್ವವನ್ನೇ ? ಮುಹೂರ್ತಕಾಲ ಹತ್ತಬಹುದು. ಇಚ್ಛೆಯಿಲ್ಲ, ಕರ್ಣ, ಇಚ್ಛೆಯಿಲ್ಲ.

ಕರ್ಣ — ಏನು, ಪೂಜ್ಯರಿಗೆ ಇಚ್ಛೆಯಿಲ್ಲವೆ ? ಮತ್ತೊಂದನ್ನು ಹೇಳುತ್ತೇನೆ, ಕೇಳಿ :

ಮದಧಾರೆ ಸುರಿದಿರೆ ಕಪೋಲದಲಿ ದುಂಬಿಗಳು
ಸೇವಿಸುತ ಬರುತಿಹವು. ಗಿರಿನಿಚಯದಂತಿಹವು.
ಮೇಘದೊಲು ಗಂಭೀರ ಘೋಷದಲಿ ಘೀಳಿಟ್ಟು
ಮೊರೆಯುವುವು. ಸಿತದಂತನಖಗಳನು ತಳೆದಿಹವು.
ಸಮರದಲಿ ರಿಪುಗಳನು ಮರ್ದಿಸುವುವಿಂತೆಸೆವ
ದಂತಿಗಳ ವೃಂದಗಳನೇಕವನು ಕೊಡುವೆ ನಿಮಗೆ. ॥ ೨೦ ॥

ಶಕ್ರ — ಗಜವನ್ನೇ ? ಮುಹೂರ್ತಕಾಲ ಹತ್ತಬಹುದು. ಇಚ್ಛೆಯಿಲ್ಲ, ಕರ್ಣ, ಇಚ್ಛೆಯಿಲ್ಲ.

ಕರ್ಣ — ಏನು, ಪೂಜ್ಯರಿಗೆ ಇಚ್ಛೆಯಿಲ್ಲವೆ ? ಮತ್ತೊಂದನ್ನು ಹೇಳುತ್ತೇನೆ, ಕೇಳಿರಿ : ಲೆಕ್ಕವಿಲ್ಲದಷ್ಟು ಹೊನ್ನು ಕೊಡುತ್ತೇನೆ.

ಶಕ್ರ — ತೆಗೆದುಕೊಂಡು ಹೋಗುತ್ತೇನೆ. (ಸ್ವಲ್ಪ ದೂರ ಹೋಗಿ) ಇಚ್ಛೆಯಿಲ್ಲ, ಕರ್ಣ, ಇಚ್ಛೆಯಿಲ್ಲ.

ಕರ್ಣ — ಹಾಗಾದರೆ ಗೆದ್ದು ಪೃಥ್ವಿಯನ್ನೇ ಕೊಡುತ್ತೇನೆ.

ಶಕ್ರ — ಪೃಥ್ವಿಯಿಂದ ಏನುಮಾಡಲಿ ?

ಕರ್ಣ — ಹಾಗಾದರೆ ಅಗ್ನಿಷ್ಟೋಮದ ಫಲವನ್ನು ಕೊಡುತ್ತೇನೆ.

ಶಕ್ರ — ಅಗ್ನಿಷ್ಟೋಮಫಲದಿಂದ ಏನುಮಾಡಬೇಕು ?

ಕರ್ಣ — ಹಾಗಾದರೆ ನನ್ನ ತಲೆಯನ್ನೇ ಕೊಡುತ್ತೇನೆ.

ಶಕ್ರ — ಅಯ್ಯೋ, ಅಯ್ಯೋ !

ಕರ್ಣ — ಹೆದರಬೇಡಿ, ಹೆದರಬೇಡಿ. ಪೂಜ್ಯರು ಪ್ರಸನ್ನರಾಗಬೇಕು. ಮತ್ತೊಂದನ್ನು ಹೇಳುತ್ತೇನೆ, ಕೇಳಿ :

ಅಂಗಗಳ ಜೊತೆಯಲೇ ಜನಿಸಿ ನನ್ನೀ ದೇಹ
ರಕ್ಷೆಯಾಗಿಹ ಕವಚವೊಂದಿಹುದು ; ಭೇದಿಸಲು
ದೇವಾಸುರರ್ಗರಿದು. ಇದು ನಿಮಗೆ ರುಚಿಸಿದರೆ
ಈ ಪರಿಯ ಕವಚವನೆ ಅಸ್ತ್ರಗಳ ಜೊತೆಗಿಟ್ಟು,
ಕುಂಡಲಗಳೊಡಗೂಡಿ, ಪ್ರೀತಿಯಿಂದೀವೆ ನಾನು. ॥ ೨೧ ॥

ಶಕ್ರ — (ಹರ್ಷದಿಂದ) ಕೊಡು, ಕೊಡು.

ಕರ್ಣ — (ತನ್ನಲ್ಲಿ ತಾನು) ಇದೇ ಇವನ ಆಸೆ. ಬಹು ಕಪಟ ಬುದ್ಧಿಯಾದ ಕೃಷ್ಣನ ಉಪಾಯವಿರಬಹುದೇ ? ಅವನೇ ಆದರೂ ಆಗಲಿ. ಛಿ, ದುಃಖಿಸುವುದು ಯುಕ್ತವಲ್ಲ. ಸಂಶಯವಿಲ್ಲ. (ಪ್ರಕಾಶವಾಗಿ) ತೆಗೆದು ಕೊಳ್ಳಬೇಕು

ಶಲ್ಯ — ಅಂಗರಾಜ, ಕೊಡಬೇಡ, ಕೊಡಬೇಡ.

ಕರ್ಣ — ಶಲ್ಯರಾಜ ! ಬೇಡ, ಬೇಡ, ತಡೆಯಬೇಡ. ನೋಡು,

ಕಾಲ ಕಳೆಯಲು ಕಲ್ತ ವಿದ್ಯೆ ಕ್ಷಯವಾಗುವುದು.
ಬದ್ಧಮೂಲಗಳಾದ ಮರಗಳಿಳೆಗುರುಳುವುವು.
ಜಲ, ಜಲಸ್ಥಾನವನು ಸೇರಿಯೂ ಬತ್ತುವುದು.
ಕೊಟ್ಟದ್ದು, ಹೋಮದಲಿ ಬೇಳಿದ್ದಿವೆರಡುಳಿವುವು. ॥ ೨೨ ॥

ಆದ್ದರಿಂದ ತೆಗೆದುಕೊಳ್ಳಬಹುದು. (ಕತ್ತರಿಸಿ ಕೊಡುತ್ತಾನೆ)

ಶಕ್ರ — (ತೆಗೆದುಕೊಂಡು, ತನ್ನಲ್ಲಿ ತಾನು) ಇವನ್ನು ತೆಗೆದುಕೊಂಡಾಯಿತು. ಹಿಂದೆಯೇ ಅರ್ಜುನನ ವಿಜಯಾರ್ಥವಾಗಿ ದೇವತೆಗಳೆಲ್ಲರೂ ಯಾವುದನ್ನು ಸಮರ್ಥಿಸಿದ್ದರೋ ಅದನ್ನು ಈಗ ನಾನು ಮಾಡಿದ್ದೇನೆ. ಆದ್ದರಿಂದ ನಾನು ಕೂಡ ಐರಾವತವನ್ನು ಹತ್ತಿ ಅರ್ಜುನ ಕರ್ಣರ ಯುದ್ಧವಿಶೇಷವನ್ನು ನೋಡುತ್ತೇನೆ. (ಹೋಗುತ್ತಾನೆ)

ಶಲ್ಯ — ಅಂಗರಾಜ, ನೀನು ವಂಚಿತನಾದೆಯಲ್ಲ !

ಕರ್ಣ — ಯಾರಿಂದ ?

ಶಲ್ಯ — ಶಕ್ರನಿಂದ.

ಕರ್ಣ — ಅಲ್ಲ, ಅಲ್ಲ, ಶಕ್ರನೇ ನನ್ನಿಂದ ವಂಚಿತನಾದನು ಏಕೆಂದರೆ,
ದ್ವಿಜರಿಂದನೇಕ ಯಜ್ಞಗಳಲಾಹುತಿಗೊಂಡು
ತಣಿದವನು, ಅರ್ಜುನನ ಪಡೆದವನು, ದಾನವರ
ಸಂಘವನು ಮರ್ದಿಪನು, ಸುರಗಜಾಸ್ಫಾಲನದಿ
ಕರ್ಕಶಾಂಗುಲಿಯಾಗಿ ಮೆರೆವವನು—ಇಂತೆಸೆವ
ಪಾಕಶಾಸನನೆನ್ನ ಬೇಡಿಯೇ ಕೃತಕಾರ್ಯನು ! ॥ ೨೩ ॥

(ಬ್ರಾಹ್ಮಣ ರೂಪದಿಂದ ಪ್ರವೇಶಿಸಿ)

ದೇವದೂತ — ಅಯ್ಯಾ ಕರ್ಣ, ಕವಚ ಕುಂಡಲಗಳನ್ನು ತೆಗೆದುಕೊಂಡದ್ದರಿಂದ ಪಾಶ್ಚಾತ್ತಾಪಗೊಂಡ ಪುರಂದರನು ನಿನ್ನನ್ನು ಅನುಗ್ರಹಿಸಿದ್ದಾನೆ. ಪಾಂಡವರಲ್ಲಿ ಒಬ್ಬ ಪುರುಷನನ್ನು ವಧಿಸುವುದಕ್ಕಾಗಿ ಅಮೋಘಾಸ್ತ್ರವೊಂದನ್ನು—ವಿಮಲಾ ಎಂಬ ಈ ಶಕ್ತಿಯನ್ನು—ತೆಗೆದುಕೊ.

ಕರ್ಣ — ಛಿ, ಕೊಟ್ಟದ್ದಕ್ಕೆ ಪ್ರತಿಯಾಗಿ ತೆಗೆದುಕೊಳ್ಳುವುದಿಲ್ಲ.

ದೇವದೂತ — ಬ್ರಾಹ್ಮಣ ವಚನಾನುಸಾರವಾಗಿ ತೆಗೆದುಕೊ.

ಕರ್ಣ — ಬ್ರಾಹ್ಮಣ ವಚನವೆಂದೋ ? ಮೊದಲೆಂದೂ ಮೀರಿ ನಡೆದಿಲ್ಲ. ಯಾವಾಗ ನನಗೆ ದೊರೆಯುತ್ತದೆ ?

ದೇವದೂತ — ಯಾವಾಗ ಸ್ಮರಿಸುವೆಯೋ ಆವಾಗ ನಿನಗೆ ದೊರೆಯುತ್ತದೆ.

ಕರ್ಣ — ಆಗಲಿ. ಅನುಗೃಹೀತನಾದೆ. ನೀವು ಹಿಂದಿರುಗಬಹುದು.

ದೇವದೂತ — ಆಗಲಿ. (ಹೋಗುತ್ತಾನೆ)

ಕರ್ಣ — ಶಲ್ಯರಾಜ, ಇನ್ನು ರಥವನ್ನು ಹತ್ತೋಣ.

ಶಲ್ಯ — ಆಗಲಿ.

(ರಥಾರೋಹಣವನ್ನು ನಟಿಸುತ್ತಾರೆ)

ಕರ್ಣ — ಓಹೋ, ಗದ್ದಲವಾಗುವಹಾಗೆ ಕೇಳುತ್ತದೆ. ಇದೇನಿರಬಹುದು !

ಪ್ರಳಯಸಾಗರ ಘೋಷಕೆಣೆಯೆನಿಪ ಶಂಖ ನಿ
ಸ್ವನ ಕೇಳಿಬರುತಿಹುದು. ಕೃಷ್ಣನದೊ, ಪಾರ್ಥನದೊ,
ಇಬ್ಬರೊಳಗೊಬ್ಬರದು. ನಿಜ, ಯುಧಿಷ್ಠಿರ ಪರಾ
ಜಯದಿಂದ ಮಿಗೆ ಕೋಪಗೊಂಡು ಪಾರ್ಥನು ತನ್ನ
ಬಲಕೊಪ್ಪುವಂದದಲಿ ಯುದ್ಧಮಾಡುವನು ಇಂದು. ॥ ೨೪ ॥

ಶಲ್ಯರಾಜ, ಆ ಅರ್ಜುನನು ಎಲ್ಲಿರುವನೋ ಅಲ್ಲಿಗೆ ನನ್ನ ರಥವನ್ನು ನಡಸು.

ಶಲ್ಯ — ಆಗಲಿ.

(ಭರತ ವಾಕ್ಯ)

ಸಂಪದಗಳೆಲ್ಲೆಡೆಯು ನಿಲಲಿ. ವಿಪದಗಳಳಿಯ
ಲಾವಗವು ನಮ್ಮ ರಾಜನು, ರಾಜಗುಣಗಳನು
ತಳೆದವನು, ತಾನೊಬ್ಬನೀ ಧರೆಯನಾಳುತಿರಲಿ. ॥ ೨೫ ॥

(ಹೊರಡುತ್ತಾರೆ)

ಕರ್ಣಭಾರ ಮುಗಿಯಿತು.

---

## ಪಾತ್ರಗಳು

ಸೂತ್ರಧಾರ

ಪಾರಿಪಾರ್ಶ್ವಕ

ಧೃತರಾಷ್ಟ್ರ

ಗಾಂಧಾರಿ

ಬಲದೇವ

ದುರ್ಯೋಧನ

ಮಾಲವಿ } ದುರ್ಯೋಧನನ
ಪೌರವಿ } ಹೆಂಡತಿಯರು

ದುರ್ಜಯ—ದುರ್ಯೋಧನನ ಮಗ

ಅಶ್ವತ್ಥಾಮ

ಮೂವರು ಭಟರು

---

# ಊರುಭಂಗ

(ನಾಂದಿಯಾದ ಮೇಲೆ ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

ಸೂತ್ರಧಾರ — ಶತ್ರುನದಿಗಾದ್ರೋಣಭೀಷ್ಮರೇ ತೀರಗಳು,
ಸಿಂಧುರಾಜನೆ ಜಲವು, ತಂತ್ರಿ ಶಕುನಿಯೆ ಮಡುವು,
ಕೃಪಕರ್ಣಗುರುಸುತರೆ ಮಕರೋರ್ಮಿನಕ್ರಗಳು,
ಬಿಲ್ಲುಗಳೆ ಮಳಲೊಟ್ಟು, ಕೌರವೇಂದ್ರನೆ ಹೊನಲು—
ಇಂತಪ್ಪ ಶತ್ರುನದಿಯಡ್ಡವಿಸಲರ್ಜುನನ
ದಾವ ಹರಿಗೋಲಿಂದ ದಾಟಿ ದಡಸೇರಿದನೊ,
ಆ ದೇವ ಕೇಶವನು ತಾನೆ ಹರಿಗೋಲಾಗಿ
ಶತ್ರುಗಳ ಭಯದಿಂದ ರಕ್ಷಿಸಲಿ ನಿಮ್ಮನೊಲಿದು ॥ ೧ ॥

ಆರ್ಯ ಮಹಾಶಯರಲ್ಲಿ ವಿಜ್ಞಾಪನೆ. ಓಹೋ! ನಾನು ವಿಜ್ಞಾಪಿಸುವುದರಲ್ಲಿ ತೊಡಗಿರುವಾಗಲೇ ಗದ್ದಲವಾಗುವ ಹಾಗೆ ಕೇಳಿಸುವುದಲ್ಲ! ಇರಲಿ, ನೋಡೋಣ.

(ತೆರೆಯಲ್ಲಿ)

ಇಗೋ, ಬಂದೆವು, ಬಂದೆವು.

ಸೂತ್ರಧಾರ — ಆಗಲಿ, ತಿಳಿಯಿತು.

ಪಾರಿಪಾರ್ಶ್ವಕ — (ಪ್ರವೇಶಿಸಿ) ಭಾವ, ಈ ಭಟರು ಎಲ್ಲಿಗೆ ಹೋಗುತ್ತಿರಬಹುದು ?

ಸ್ವರ್ಗಕೋಸುಗ ತಮ್ಮ ತನುವನೇ ಯುದ್ಧಾಗ್ನಿ
ಮುಖದಿ ಹೋಮವ ಮಾಡಲೆಳಸಿ, ವಿಧವಿಧ ಶಸ್ತ್ರ
ನಾಟಿ, ಮದ್ದಾನೆಗಳ ದಂತಗಳ ತುದಿ ತೀಡಿ

ಚೂರಾದ ಮೈಯಾಂತು ; ಒಬ್ಬರೊಬ್ಬರ ಶೌರ್ಯ
ದೊರೆಗಲ್ಲಿನಂದದಲಿ ಸುತ್ತುವರು ಭಟರು. ॥ ೨ ॥

ಸೂತ್ರಧಾರ— ಮಾರಿಷ, ಏನು, ನಿನಗೆ ಗೊತ್ತೇ ಇಲ್ಲವೆ? ಧೃತರಾಷ್ಟ್ರನ ಕಡೆಯಲ್ಲಿ ನೂರು ಮಕ್ಕಳೂ ಮಡಿದು ದುರ್ಯೋಧನನೊಬ್ಬನೇ ಉಳಿದನು. ಯುಧಿಷ್ಠಿರನ ಕಡೆಯಲ್ಲಿ ಪಾಂಡವ ಕೃಷ್ಣರು ಮಾತ್ರ ಉಳಿದರು. ಸಮಂತಪಂಚಕವು ರಾಜರ ಶರೀರಗಳಿಂದ ಕಿಕ್ಕಿರಿದು ಹೋಯಿತು. ಈ ಸಮಯದಲ್ಲಿ,

ಈ ಯುದ್ಧರಂಗದಲಿ ಮಡಿದಾನೆ ಕುದುರೆಗಳ
ಭೂಭುಜರ ಸಾಲ್ ಕಲೆತು ಬಣ್ಣಬಣ್ಣವ ಕಲಸಿ
ಬಳಿದ ಚಿತ್ರದ ತೆರದಿ ಗೋಚರಿಸುತಿಹುದಿಂದು.
ಭೀಮ ದುರ್ಯೋಧನರು ರಣರಂಗದಲಿ ನಿಂದು
ಸೆಣಸುತಿಹರಿದನರಿತು ಭಟರು ನಡೆದರು ಬೇಗ
ದೊರೆಗಳನು ಮುರಿದು ನೆಲಕೊರಗಿಸುವ ರಂಗದೆಡೆಗೆ. ॥ ೩ ॥

(ಹೊರಡುವರು)

ಸ್ಥಾಪನೆ ಮುಗಿಯಿತು.

---

(ಬಳಿಕ ಮೂವರು ಭಟರು ಪ್ರವೇಶಿಸುತ್ತಾರೆ)

ಎಲ್ಲರೂ— ಬಂದೆವು, ಬಂದೆವು.

ಮೊದಲನೆಯವನು— ನೋಡಿರದೊ ಮುಂಗಡೆಯೆ ಕಾಣುತಿದೆ ರಣರಂಗ :
ವೈರವನು ಕುದಿಸುವೆಡೆ, ಬಲವನೊರೆಯಿಕ್ಕುವೆಡೆ,
ಮಾನಕಿದು ನೆಲೆವನೆಯು ; ಭೂಮಿಪರು ಶೌರ್ಯವನು
ಬೀರುವೆಡೆ, ಅಚ್ಚರಸಿಯರು ಮೆಚ್ಚುವಾ ಸ್ವಯಂ
ವರ ಸಭೆಯು ; ನೃಪರು ಕಡೆಗಾಲದಲಿ ಪವಡಿಸುವ
ವೀರಶಯನವು ; ಸ್ವರ್ಗಕಡರುವಾದೊರೆಗಳ್ಗೆ

ಸೋಪಾನಮಾರ್ಗವಿದು ; ಪ್ರಾಣಾಗ್ನಿ ಹೋಮಗಳ
ಯಜ್ಞಗಳ ತಳಿದೆಸೆಯುವಾಶ್ರಮವು—ಗೋಚರಿಪುದು. ॥ ೪ ॥

ಎರಡನೆಯವನು — ಚೆನ್ನಾಗಿ ಹೇಳಿದೆ

ಮಡಿದಾನೆಗಳು ಕುಸಿದ ಬೆಟ್ಟಗಳ ಹೋಲುವುವು.
ಅತಿರಥರು ಹತರಾಗಿ ರಥಗಳೆಲ್ಲೆಲ್ಲಿಯೂ
ಹದ್ದುಗಳ ಗೂಡಾಗಿ ಬಿದ್ದಿಹವು. ಕದನದಲಿ
ಕೈಬಿಡದೆ ಕಾದಿ ದೊರೆಗಳು ಮಡಿದು ಸ್ವರ್ಗವನು
ನೇರಿದರು. ಬೆಂಗೊಡದೆ ಹೊಡೆದಾಡಿ ಹೊಡೆದಾಡಿ,
ಅಂತೆಸಗಿ ಇಂತೆಸಗಿ, ಕಡೆಗೆ ಮಲಗಿದರು. ॥ ೫ ॥

ಮೂರನೆಯವನು — ಇದು ಹೀಗೆ,

ಸೊಂಡಿಲೇ ಯೂಪಗಳು, ಬಾಣಗಳೆ ದರ್ಭೆಗಳು,
ಆನೆಗಳ ಹೆಣಗಳಾ ಬಣಬೆಗಳೆ ಚಯನಗಳು,
ವೈರವೇ ಧಗಧಗಿಪ ಬೆಂಕಿಯುರಿ. ಧ್ವಜಗಳೆ ವಿ
ಮಾನಗಳು, ಸಿಂಹನಾದವೆ ಮಂತ್ರ, ಹತರಾದ
ಮಾನವರೆ ಪಶುಗಳೀಯುದ್ಧವೇ ಯಜ್ಞವಹುದು. ॥ ೬ ॥

ಮೊದಲನೆಯವನು — ಇನ್ನೊಂದು ಸಂಗತಿಯನ್ನು ನೋಡಿ,
ಒಬ್ಬರೊಬ್ಬರ ಬಾಣಕಸುವನೊಪ್ಪಿಸಿ ನೆಲದಿ
ದೊರೆಗಳುರುಳಿರಲವರ ಹದ್ದುಗಳು ಮುತ್ತುವುವು.
ನೆತ್ತರಿಂದಲಿ ನೆನೆದ ಕೊಕ್ಕಿಂದ ಕುಕ್ಕುತ್ತ
ಮೈದೊಡವನಲುಗಿಸುತ ಕಳಚಿ ಬಿಸುಡುವುವು. ॥ ೭ ॥

ಎರಡನೆಯವನು — ಮೊದಲಿಂದ ತುದಿವರೆಗೆ ಯುದ್ಧಕೊದಗುವುದೆಂದು
ಬಿಲ್ಲುಬಾಣವ ತುಂಬಿ, ಮೈಮರೆಯ ಹೊದಿಸುತ್ತ
ಸಿದ್ಧಪಡಿಸಿದ ಗಜವು ಶಸ್ತ್ರಶಾಲೆಯ ಪೋಲ್ತು
ದೆಡೆಬಿಡದೆ ನಾರಾಚಬಾಣಗಳ ಮಳೆ ಸುರಿದು
ಮೈಮರೆಯು ಕತ್ತರಿಸೆ, ಆನೆಯೊರಗಿದುದು. ॥ ೮ ॥

ಮೂರನೆಯವನು — ಮತ್ತೊಂದು ವಿಚಾರವನ್ನು ನೋಡಬನ್ನಿ!

ಧ್ವಜದ ತುದಿಯಿಂದುರುಳಿ ಬಿದ್ದ ಹೂಗಳು ಕೊರಳ
ಹಾರವಾಗಿರೆ ರತ್ನಿ ಸಾಯಕವ ಹಿಡಿದು ಮಡಿ
ದೊರಗಿರುವ ರಥಿಕನನು ಹೆಣ್ಣು ನರಿಗಳು ಹರ್ಷ
ದಿಂದ ಕೆಳಗಿಳಿಸುವುವು, ವಾಹನದ ಮೇಲಿಂದ
ಮನೆಯಳಿಯನನು ಬಂಧು ನಾರಿಯರು ಕೆಳಗಿಳಿಸುವಂತೆ
॥ ೯ ॥

ಎಲ್ಲರೂ — ಓಹೋ! ಮಡಿದುಬಿದ್ದ ಆನೆ ಕುದುರೆಗಳ ಮತ್ತು ಮನುಷ್ಯರ ರಕ್ತದಿಂದ ನೆಲವೆಲ್ಲ ಕೆಸರಾಗಿ ಹೋಗಿದೆ ಸುತ್ತಲೂ ಚೆಲ್ಲಿದಂತೆ ಹರಡಿ ಬಿದ್ದಿರುವ ವರ್ಮ, ಚರ್ಮ, ಛತ್ರ, ಚಾಮರ, ತೋಮರ, ಶರ, ಕುಂತ, ಕವಚ ಕಬಂಧಾದಿಗಳಿಂದ ಎಲ್ಲೆಡೆಯೂ ಕಿಕ್ಕಿರಿದು ಹೋಗಿದೆ. ಶಕ್ತಿ, ಪ್ರಾಸ, ಹಾಟಕ, ಭಿಂಡಿವಾಲ, ಶೂಲ, ಮುಸಲ, ಮುದ್ಗರ, ವರಾಹಕರ್ಣ, ಕಣಯ, ಕರ್ಪಣ, ಶಂಕು, ತ್ರಾಸಿ, ಗದೆಯೇ ಮೊದಲಾದ ಆಯುಧಗಳಿಂದ ತುಂಬಿರುವ ಈ ಸಮಂತ ಫಂಚಕವು ಎಷ್ಟು ಭಯಂಕರವಾಗಿರುವುದು!

ಮೊದಲನೆಯವನು — ಇಲ್ಲಿಯಾದರೋ,

ನೆತ್ತರಿನ ಹೊಳೆಗಳೆತ್ತೆತ್ತಲೂ ಹರಿಯುತಿರೆ
ಸತ್ತೊರಗಿದಾನೆಗಳೆ ನೇತುವೆಗಳಾಗಿಹವು.
ದೊರೆ ಮಡಿದು ಮರೆಯಾಗಿ, ಸಾರಥಿಯು ಸರಿದೂರಗಿ,
ಬರಿಯ ರಥಗಳನೆಳೆದು ಕುದುರೆಗಳು ಹಾರುವುವು.
ರುಂಡ ಕೆಳಗುರುಳಿದರು ಮೊದಲಿನಭ್ಯಾಸವನು
ಬಿಡದೆ ಮುಂಡಗಳೋಡಿ, ಮುಂದೋಡಿ ಬೀಳುವುವು.
ಮದಿಸಿದಾನೆಗಳೆಲ್ಲ ಮಾವಟಿಗರಿಲ್ಲದೆಯೆ
ಮನಬಂದ ತೆರದಿಂದಲೆತ್ತಲೂ ಸುತ್ತುತಿಹವು. ॥ ೧೦ ॥

ಎರಡನೆಯವನು — ಮಧೂಕಮುಕುಳದ ಹಾಗೆ ದೊಡ್ಡ ಕೆಂಗಣ್ಣುಗಳು,
ದೈತ್ಯೇಂದ್ರನಾನೆಯಂಕುಶದಂತೆ ಕೊಕ್ಕುಗಳು,

ಗಗನದಲಿ ಜೋಲುತಿಹ ಹರಡಿದಾ ರೆಕ್ಕೆಗಳು—
ಇಂತೆಸೆವ ಹದ್ದುಗಳು ಮಾಂಸವನು ಜೋಲಿಸುತ
ಹಾರುತಿರೆ ಹವಳಗಳ ಹಿಡಿಯಿಂದ ರಂಜಿಸುವ
ಬೀಸಣಿಗೆಯೆಂಬಂತೆ ತೋರುತಿಹವು. ॥ ೧೧ ॥

ಮೂರನೆಯುವನು — ಭಾಸ್ಕರನ ಖರಕಿರಣವೆಲ್ಲವನು ತೋರುತಿರೆ,
ಹಯನಾಗನರಪತಿಗಳುಡುಗಿ, ಶರನಾರಾಚ
ಕುಂತ ತೋಮರ ಖಡ್ಗರಾಶಿಗಳು ಕಿಕ್ಕಿರಿದ
ರಣಭೂಮಿ, ಗಗನದಿಂದುರುಳಿದಾ ನಕ್ಷತ್ರ
ಮಂಡಲವ ತಾಳ್ದಂತೆ ಕಂಗೊಳಿಪುದು ॥ ೧೨ ॥

ಮೊದಲನೆಯುವನು — ಇಂಥ ಅವಸ್ಥೆಯಲ್ಲಿಯೂ ಕ್ಷತ್ರಿಯರು ಕಳೆಗುಂದದೆ ಇನ್ನೂ ಪ್ರಕಾಶಿಸುತ್ತಲೇ ಇರುವರು.

ಸುರಿವ ಬೆವರಿಂ ನೆನೆದ ಕಣ್ ದುಂಬಿವಿಂಡುಗಳು,
ಚೆಂದುಟಿಯೆ ಪತ್ರಗಳು, ಹುಬ್ಬುಗಂಟುಗಳೆಸೆವ
ಕೇಸರಗಳುಜ್ವಲ ಕಿರೀಟಗಳೆ ಪಟಲಗಳು,
ನಾರಾಚಪಂಕ್ತಿಗಳೆ ನಾಳಗಳು, ಭೂಭುಜರ
ಮುಖಗಳೇ ಪದ್ಮಗಳು—ಈ ಪರಿಯ ಪದ್ಮಗಳು
ವೀರ್ಯ ಸೂರ್ಯೋದಯದಿ ಭಯವಿನಿತ ತೋರದೆಯೆ
ಸ್ಥಲಪದ್ಮದಂದಲಿ ಕಂಪಿಸದೆ ರಂಜಿಸುವುವು. ॥ ೧೩ ॥

ಎರಡನೆಯುವನು — ಇಂಥ ಕ್ಷತ್ರಿಯರ ಮೇಲೂ ಮೃತ್ಯುವು ತನ್ನ ಅಧಿಕಾರವನ್ನು ನಡಸುವುದಲ್ಲ! *ವಿಷಮ ಸ್ಥಿತಿಯಲ್ಲಿರುವ ಪುರುಷರು ತಮ್ಮ ರಾಜ ಬಲವನ್ನು ತೋರಿಸುವುದು ಶಕ್ಯವಲ್ಲ.

ಮೂರನೆಯುವರು — ಏನು? ಕ್ಷತ್ರಿಯರ ಮೇಲೂ ಮೃತ್ಯುವಿನ ಅಧಿಕಾರವೇ?

ಮೊದಲನೆಯುವನು — ಸಂದೇಹವೇನು?

ಮೂರನೆಯುವನು — ಅಲ್ಲ, ಹಾಗಲ್ಲ,

---

*ನ ಶಕ್ಯಂ ಖಲು ವಿಷಮಸ್ಥೈಃ ಪುರುಷೈ ರಾಜಬಲಾ (ದಾ? ಧಾ) ಸಂಕೀರ್ತನಮ್.

ಖಾಂಡವದ ಹೊಗೆಯಿಂದ ರಂಜಿಸುವ ಹೆದೆಯಾಂತು,
ಸಂಶಪ್ತಕರ ಮುರಿದು, ನಿವಾತಕವಚರ ಹರಣ
ದುಪಹಾರದಿಂ ತಣಿದು, ಸಗ್ಗದುದ್ವೇಗವನು
ತಗ್ಗಿಸಿದ ಗಾಂಡಿವದಿ, ಶಿವನ ರಣದೊಳಗಂದು
ಕಳೆದುಳಿದ ಕೂರಂಬುಗಳ ಹೂಡಿ, ದರ್ಪವನು
ತೋರಿಸಿದ ಕ್ಷತ್ರಿಯರನೆಲ್ಲರನು ಕಲಿ ಪಾರ್ಥ
ತೂರಿದನು ಮೃತ್ಯುಮುಖದಿ. ॥ ೧೪ ॥

ಎಲ್ಲರೂ — ಇದೇನು ಸದ್ದು !

ಮೋಡಗಳು ಗುಡುಗುವುವೊ ; ವಜ್ರಪಾತಕೆ ಸಿಡಿದು
ಪರ್ವತಗಳೊಡೆಯುವುವೊ ; ಎದೆಯೊಡೆಯುವಾರ್ಭಟದಿ
ನೆಲ ಬಿರಿದು ಬಾಯ್ಬಿಟ್ಟು ಸೀಳುವುದೊ ; ಬಿರುಗಾಳಿ
ಭೋರ್ಗರೆದು ಕಡಲುಕ್ಕಿ ಮೊರೆದು ಪೆರ್ದೆರೆಯೆದ್ದು
ಬಿದ್ದು ಮಂದರಗಿರಿಯು ಮುಳುಗಿಪುದೊ ; ಶಬ್ದವೇನೋ !
॥ ೧೫ ॥

ಆಗಲಿ, ಇದೇನೋ ನೋಡೋಣ.

(ಎಲ್ಲರೂ ಮುಂದೆ ನಡೆಯುತ್ತಾರ)

ಮೊದಲನೆಯವನು — ಓಹೋ ! ಕುರುಯದುಕುಲಗಳೆರಡಕ್ಕೂ ದೇವತೆಗಳೆನಿಸಿದ ವ್ಯಾಸ, ಹಲಾಯುಧ, ಕೃಷ್ಣ, ವಿದುರರೇ ಮೊದಲಾದವರೆದುರಿಗೆ, ದ್ರೌಪದಿಯ ಮುಡಿಯನ್ನು ಹಿಡಿದೆಳಸಿದ ಅವಮಾನದಿಂದ ಕೋಪಗೊಂಡ ಪಾಂಡವಮಧ್ಯಮನೆನಿಸಿದ ಭೀಮಸೇನನಿಗೂ, ನೂರ್ವರು ತಮ್ಮಂದಿರ ವಧೆಯಿಂದ ಕುಪಿತನಾದ ಮಹಾರಾಜ ದುರ್ಯೋಧನನಿಗೂ ಗದಾಯುದ್ಧವು ಮೊದಲಾಗಿರುವುದು.

ಎರಡನೆಯವನು — ತಪ್ತಕಾಂಚನಶಿಲಾತಲದಂತೆ ಪಿರಿದಾದ
ಭೀಮನೆದೆಯನು ಕುಟ್ಟಿ, ಇಂದ್ರನೈರಾವತದ
ಸೊಂಡಿಲಾರ್ಪನು ತಳೆದ ದುರ್ಯೋಧನನ ತೋಳ

ನೊಡೆದು, ಮೇಣೋರೊರ್ವರೆದೆಗೆ ಹೊಡೆಯುತಲಿರಲು
ತೋಳ್ಗಳೆರಡರ ನಡುವಣೆಡೆಗಳನು ಬಡಿ ಬಡಿವ
ಗದೆಗಳೊಡಲಿಂದೊಗೆದು ಶಬ್ದ ಹೊರಹೊಮ್ಮುತಿಹುದು. ॥ ೧೬ ॥

ಮೂರನೆಯವನು — ಈ ಮಹಾರಾಜನು,

ತಲೆಯಲುಗಿ ಬಾಗಿದ ಕಿರೀಟವನು ತಳೆದಿಹನು.
ಕ್ರೋಧದಿಂದರಳಿರುವ ಕಣ್ಣುಗಳನಾಂತಿಹನು.
ಸ್ಥಾನವಾಕ್ರಮಿಸಲ್ಕೆ ತನುವ ಕುಗ್ಗಿಸಿ ನಿಂದು
ಕೈಯ ಝುಳಪಿಸುತಿಹನು. ಕೈಲಾಸ ಪರ್ವತದ
ಶಿಖರದಗ್ರದೊಳಾ ಮಹೇಂದ್ರ ವಜ್ರಾಯುಧವು
ನಿಂತವೊಲು ರಿಪುರಕ್ತದಲಿ ನೆನೆದು ಕೆಸರಾದ
ಬಲ್ಗದೆಯು ಕರತಲದಿ ಕಂಗೊಳಿಸುತಿಹುದು. ॥ ೧೭ ॥

ಮೊದಲನೆಯವನು — ಏಟು ಬಿದ್ದು ಹೊರಸೂಸಿದ ರಕ್ತದಿಂದ ನೆನೆದ ಮೈಯುಳ್ಳ ಈ ಪಾಂಡವನನ್ನು ನೋಡಿ,

ಹಣೆಯ ಮುಂಗಡೆಯೊಡೆದು ಕೆನ್ನೀರ ಸರಿ ಸುರಿದು
ಸೋರುತಿದೆ. ಭುಜಗಳಾ ಬಿಗುಹು ಮೈದೆಗೆಯುತಿದೆ.
ಎಡೆಬಿಡದೆ ಸುರಿ ಸುರಿವ ರುಧಿರಧಾರೆಗಳಿಂದ
ಭೀಮನೆದೆ ನೆನೆಯುತಿದೆ. ಗದೆಯ ಹೊಡೆತದೊಳುಕ್ಕಿ
ಹರಿವ ನೆತ್ತರು ತುಂಬಿ ಹುಣ್ಣು ರಾಜಿಸುತಿರಲು
ಧಾತುಸಲಿಲದ ಮಳೆಗೆ ನೆನೆದ ಕಲ್ಗಳನಾಂತ
ಮೇರುಗಿರಿಯನು ಪೋಲ್ತು ಭೀಮ ಕಂಗೊಳಿಸುತಿಹನು.
॥ ೧೮ ॥

ಎರಡನೆಯವನು — ಭೀಮಗದೆ ಬೀಸುವನು, ಬಾಗಿ ಬೊಬ್ಬಿರಿಯುವನು.
ಬೇಗ ಭುಜವನು ತೆಗೆವನವನ ಗುರಿಮುರಿಯುವನು.
ಚಾರಿಗತಿಯಲಿ ನಡೆವನೊಡನೊಡನೆ ಹೊಡೆಯುವನು.
ನರಪತಿಯು ಶಿಕ್ಷಿತನು, ಭೀಮನೋ ಬಲವಂತನು. ॥ ೧೯ ॥

ಮೂರನೆಯವನು — ಈ ವೃಕೋದರನು,

ಭೂಧರಕೆ ಸರಿಸಮನು. ಸಂಗರದಿ ವಿಕ್ರಮದ
ನೆಲೆಯರಿಯಲರಿದೆನಿಪ ಧುರಧೀರಸಾಹಸಿಯು.
ನೆತ್ತಿಯಲಿ ಕಿತ್ತುಗುವ ರಕ್ತದಲಿ ಮೈನೆನೆದು
ಭೂಮಿಯಲಿ ಬೀಳುತಿಹನು—ವಜ್ರಪಾತದಿ ಬೆಂದು
ಸಿಡಿಲಿ ಸುರಿಯಲು ಧಾತು ಗಿರಿರಾಜನೆನಿಸಿರುವ
ಹೇಮಕೂಟವು ನೆಲಕೆ ಬೀಳ್ವಂತೆ ಬೀಳುತಿಹನು. ॥ ೨೦ ॥

ಮೊದಲನೆಯವನು — ಬಲವಾದ ಪೆಟ್ಟಿನಿಂದ ಅಂಗಗಳ ಬಿಗಿ ತಪ್ಪಿ ಬೀಳುತ್ತಿರುವ ಈ ಭೀಮಸೇನನನ್ನು ನೋಡಿ,

ಬೆರಳ ಗಲ್ಲದಲಿಟ್ಟು ಮೊಗವ ಮೇಗಡೆಗೆತ್ತಿ
ವ್ಯಾಸಋಷಿ ವಿಸ್ಮಯದಿ ನಿಂದು ನೋಡುವನು.

ಎರಡನೆಯವನು — ಆ ಯುಧಿಷ್ಠಿರನಿತ್ತ ದೈನ್ಯವನು ತಾಳಿದನು.
ವಿದುರ ಕಂಬನಿದುಂಬಿ ಕಳವಳಿಸುತಿಹನು.

ಮೂರನೆಯವನು — ಅರ್ಜುನನು ಗಾಂಡಿವದ ಕಡೆಗೆ ಕೈಚಾಚಿದನು.
ಶ್ರೀಕೃಷ್ಣ ಗಗನವನೆ ದೃಷ್ಟಿಸುತಲಿಹನು.

ಎಲ್ಲರೂ — ಪ್ರೇಕ್ಷಕನು ಬಲರಾಮ ಶಿಷ್ಯನೊಲವಿಂ ನಲಿದು
ನೇಗಿಲನು ಗಿರಗಿರನೆ ತಿರುಗಿಸುತಲಿಹನು. ॥ ೨೧ ॥

ಮೊದಲನೆಯವನು — ಇಗೋ ! ಮಹಾರಾಜನು,

ವೀರ್ಯಕಾಲಯನಿವನು, ವಿವಿಧ ರತ್ನ ವಿಚಿತ್ರ
ಮೌಲಿಯುತನಭಿಮಾನಿ, ತೇಜಸ್ವಿ, ಸಾಹಸಿಯು,
ವಿನಯವಂತನು ನಗುತ ತಾ ನುಡಿಯುತಿಹನು :
"ಭಯವ ಬಿಡು ಬಿಡು ಭೀಮ ! ಯುದ್ಧದಲಿ ದೀನನನು
ಕೊಲ್ಲಲೊಲ್ಲನು ವೀರಪುರುಷನೆಂ" ದು. ॥ ೨೨ ॥

ಎರಡನಯವನು — ಈಗ ಭೀಮಸೇನನು ಅಪಹಾಸ್ಯಕ್ಕೆ ಗುರಿಯಾದುದನ್ನು ಕಂಡು ಜನಾರ್ದನನು ತನ್ನ ತೊಡೆಯನ್ನು ಹೊಡೆದುಕೊಂಡು ಏನೋ ಒಂದು ಬಗೆಯಾಗಿ ಸಂಜ್ಞೆ ಮಾಡುತ್ತಿರುವನು.

**ಮೂರನೆಯವನು** — ಮಾರುತಿಯು ಈ ಸಂಜ್ಞೆಯಿಂದ ಹುರುಪುಗೊಂಡವನಾಗಿ,

ಹುಬ್ಬುಗಳ ಹುರಿಮಾಡಿ, ಹಣೆಯ ಬೆವರನು ಕೂಡೆ
ಕೈಯಿಂದಲೊರಸುತ್ತ, ಚಿತ್ರಾಂಗದಾಖ್ಯೆಯನು
ತಳೆದ ತನ್ನುರುಗದೆಯ ತೋಳ್ಗಳಲಿ ಬಿಗಿಹಿಡಿದು ;
ಸಿಂಹದೊಲು ಗೂಳಿಯೊಲು ಕೆಂಗಣ್ಣ ತಿರುಗಿಸುತ
ಗರ್ಜಿಸುತ ; ನೆಲದಿಂದ ಮತ್ತೆ ಮೇಲೇಳುತಿಹನು—
ಮಗನ ದೈನ್ಯವ ನೋಡಿ ವಾಯುದೇವನು ಮರುಗಿ
ಮಿಗಿಲು ಬಲವನು ನೀಡಲದ ಪಡೆದನೆಂಬವೊಲು
ಭೀಮ ಚೇತನಗೊಂಡು ಗರ್ಜಿಸುತಲೇಳುತಿಹನು ॥ ೨೩ ॥

**ಮೊದಲನೆಯವನು** — ಅಗೋ ! ಮತ್ತೆ ಗದಾಯುದ್ಧವು ಮೊದಲಾಯಿತು.

ಅಂಗ್ಛೆಯ ನೆಲಕುಚ್ಚಿ, ಬಾಹುಗಳನಪ್ಪಳಿಸಿ,
ಹಲ್ಲುಮುಡಿಯನು ಕಚ್ಚಿ , ಕ್ರೋಧ ಮೇಲುಕ್ಕುತಿರೆ
ಬೊಬ್ಬಿರಿದು ಮೊರೆಯುತ್ತ ; ವಿಕ್ರಮದ ಸೊಕ್ಕಿನಲಿ
ಧರ್ಮವನು ಕಡೆಗಣಿಸಿ, ಕರುಣೆಯನು ಬದಿಗೊತ್ತಿ,
ಮಲ್ಲ ಸಮಯವ ಮೀರಿ, ಪಾಂಡುತನಯನು ತನ್ನ
ಗದೆಯಿಂದ ಕುರುಪತಿಯ ತೊಡೆಯನಪ್ಪಳಿಸಿದನು—
ಕೃಷ್ಣನಾ ಸಂಜ್ಞೆಯನು ಸಫಲಗೊಳಿಸಿದನು. ॥ ೨೪ ॥

**ಎಲ್ಲರೂ** — ಅಯ್ಯೋ ! ಅಯ್ಯೋ ! ಮಹಾರಾಜನು ಬಿದ್ದುಬಿಟ್ಟನು.

**ಮೂರನೆಯವನು** — ಅಂಗಗಳಿಂದ ರಕ್ತವನ್ನು ಸುರಿಸಿಕೊಂಡು ಬೀಳುತ್ತಿರುವ ಕುರುರಾಜನನ್ನು ನೋಡಿ ಭಗವಾನ್ ವ್ಯಾಸಮಹರ್ಷಿಯು ಆಕಾಶಕ್ಕೆ ನೆಗೆದುಬಿಟ್ಟನು.

**ಎರಡನೆಯವನು** — ಬಲರಾಮನಿದ ಕಂಡು ಕಣ್ಣುಗಳ ಮುಚ್ಚಿದನು.

ದುರ್ಯೋಧನನ ಪರಿಗೆ ಕನಲಿ ಕಣ್ಮುಚ್ಚಿದಾ
ಹಲಧರನ ಕ್ರೋಧವನು ಕಂಡು ದ್ವೈಪಾಯನನು
ನೆನಪುಗುಡೆ, ಭ್ರಾತೃಕರಪಂಜರದಿ ತಾನಡಗಿ,

ಭೀಮ ಕೃಷ್ಣನ ಕೈಯ ಹಿಡಿದು ನಡೆಯುತಲಿರಲು,
ಹೆದರಿ ಪಾಂಡವರವನ ಕರೆದೊಯ್ಯುತಿಹರು. || ೨೫ ||

ಮೊದಲನೆಯವನು— ಎಲೈ, ಪೂಜ್ಯನಾದ ಈ ಹಲಾಯುಧನಾದರೋ, ಕ್ರೋಧದಿಂದ ಕೆರಳಿದ ಕಣ್ಣುಗಳುಳ್ಳವನಾಗಿ ಭೀಮಸೇನನು ಓಡಿಹೋಗುವುದನ್ನೇ ದೃಷ್ಟಿಸಿ ನೋಡುತ್ತ ಇತ್ತಕಡೆಗೇ ಬರುತ್ತಿರುವನು. ಈತನು,

ದೊಡ್ಡ ಕೆಂಗಣ್ಣುಗಳು ಕಿಡಿಯ ಕಾರುತಲಿರಲು
ಕ್ರೋಧದಿಂದತ್ತಿತ್ತ ತಲೆಯನಲುಗಿಸುತಿಹನು.
ದುಂಬಿಗಳು ತುಂಬಿರುವ ಕುಸುಮ ಮಾಲೆಯ ಪಿಡಿದು
ನಸುಮೇಲಕೆತ್ತುತ್ತ, ಶುಭ್ರದೇಹವ ಸುತ್ತಿ
ಜೋಲ್ವ ವಸ್ತ್ರವ ಮೇಲಕೆಳೆಯುತ್ತ ಬರುತಿಹನು ;
ಪರಿವೇಷದೊಡಗೂಡಿ ಭೂಮಿಗಿಳಿದೈತಂದ
ಚಂದ್ರನಿವನೆಂಬಂತೆ ಗೋಚರಿಸಿ ಬರುತಲಿಹನು || ೨೬ ||

ಎರಡನೆಯವನು— ಹಾಗಾದರೆ ನಡೆಯಿರಿ, ನಾವೂ ಕೂಡ ಮಹಾರಾಜನ ಸಮೀಪಕ್ಕೆ ಹೋಗೋಣ.

ಇಬ್ಬರೂ— ಆಗಲಿ. ಮೊದಲು ಮಾಡತಕ್ಕದ್ದಿದು.

(ಹೋಗುವರು)

ವಿಷ್ಕಂಭಕ ಮುಗಿಯಿತು.

---

(ಆ ಮೇಲೆ ಬಲದೇವನು ಪ್ರವೇಶಿಸುತ್ತಾನೆ)

ಬಲದೇವ— ಎಲೆ ಎಲೆ ಪಾರ್ಥಿವರೇ, ಇದು ಯುಕ್ತವಲ್ಲ.

ಪಗೆವಡೆಯ ಜವನೆನಿಪ ನೇಗಿಲನು ನೋಡದೆಯೆ,
ರಣರಂಗಕೈತಂದು ಸಂಧಿಗೊಪ್ಪದೆ ನಿಂದ
ನನ್ನನೂ ಬಲದಿಂದ ಬಲು ಬೇಗಿ ಲೆಕ್ಕಿಸದೆ,
ಯುದ್ಧಮಧ್ಯದೊಳವನು—ಅವನು—ದುರ್ಯೋಧನನ
ತೊಡೆಯನಾ ಗದೆಯಿಂದ ಬಡಿದು ಕೆಡಹಿದನು ! || ೨೭ ||

ಅಪ್ಪಾ, ದುರ್ಯೋಧನ, ಒಂದು ಗಳಿಗೆಯವರೆಗೆ ಸಮಾಧಾನ ತಂದುಕೊ.

ನೇಗಿಲಿದು ಸೌಭನನು ನುಂಗಿತು ; ಮಹಾಸುರರ
ಪಟ್ಟಣ ಪ್ರಾಕಾರ ಕೂಟಗಳಿಗಂಕುಶವು ;
ಕಾಳಿಂದಿಯಾ ಜಲವ ಬೇರೆಡೆಗೆ ತಿರುಗಿಸಿತು ;
ರಿಪುಬಲ ಪ್ರಾಣದುಪಹಾರದರ್ಚನೆಯಿಂದ
ತಣಿದಿರುವ ನೇಗಿಲಿದು. ಇದನಿಂದು ಮೇಲೆತ್ತಿ
ಬೆವರು ರಕ್ತಗಳಿಂದ ನೆನೆದು ಹದವಾಗಿರುವ
ಭೀಮಸೇನನ ಹರಡಿದೆದೆಯೊಳಗೆ ನಾಟುವೆನು ;
ಹೊಲವನುಳುವಂತವನ ಹೃದಯವನು ಕಿತ್ತುಳುವೆನು. ॥ ೨೮ ॥

(ತೆರೆಯಲ್ಲಿ)

ಸೈರಿಸಬೇಕು, ಪೂಜ್ಯರು ಸೈರಿಸಬೇಕು.

ಬಲದೇವ— ಈ ಸ್ಥಿತಿಯಲ್ಲಿದ್ದರೂ ಬಳಲಿ ತಪಿಸುತ್ತಿರುವ ದುರ್ಯೋಧನನು ನಷ್ನನ್ನು ಅನುಸರಿಸಿ ಬರುತ್ತಿರುವನು.

ಯುದ್ಧಚಂದನ ಪೂಸಿದಂತೆ ಬಿಸುನೆತ್ತರಿಂ
ನೆನೆದ ಮೈ ರಂಜಿಪುದು. ನೆಲ ಸೋಂಕೆ ತೋಳುಗಳು
ದೂಳ್ ಕವಿದು ನಸುಗೆಂಪ ತಾಳಿಹುವು. ಕೌರವನು
ಮತ್ತೊಮ್ಮೆ ಮಕ್ಕಳಾಟವನಾಡಿ ತೋರುತಿಹನು.
ದೇವರಾಕ್ಷಸರಂದು ಕಡಲ ಕಡೆದಾ ಬಳಿಕ
ಬೆಟ್ಟದಿಂದಲಿ ಬಿಚ್ಚಿ ಕಳುಹಿಸಲು, ಸಾಗರದಿ
ಹೆಡೆಯ ಗಡಣವನೆಳೆದು ಬಲು ಬಳಲಿ ಮುಂಬರಿದ
ವಾಸುಕಿಯನನುಕರಿಸಿ ಬರುತಿಹನು ಕುರುರಾಜನು. ॥ ೨೯ ॥

(ಬಳಿಕ ತೊಡೆಯುಡಿದ ದುರ್ಯೋಧನನು ಪ್ರವೇಶಿಸುವನು)

ದುರ್ಯೋಧನ— ಸಮಯ ವ್ಯವಸ್ಥೆಯನು ಮೀರಿ ಭೀಮನು ಹೊಡೆದ
ಗದೆಯ ಗಾಯದಲೆನ್ನ ತೊಡೆಯುಡಿದುದೀಗ.

ಅರೆಜೀವದಿಂದಿರುವ ದೇಹವನು ಭೂಮಿಯಲಿ
ಕೈಯೂರಿ, ತೋಳ್ಬಲದಿನೆಳೆದು ನಡೆಯುವೆನು. || ೩೦ ||

ಸೈರಿಸಬೇಕು, ಪೂಜ್ಯರು ಸೈರಿಸಬೇಕು.

ಭೂಮಿಯಲಿ ಕೆಡೆದೆನ್ನ ತಲೆಯು ನಿಮ್ಮಡಿಗಳಲಿ
ಹೊರಳುತಿದೆ. ಬಲದೇವ, ಬಿಟ್ಟುಬಿಡಿ ರೋಷವನು
ಬದುಕಿರಲಿ ಪಾಂಡವರು ; ಕುರುಕುಲ ತಿಲಾಂಜಲಿಯು
ಮುಗಿಲುಗಳು ಬದುಕಿರಲಿ. ಮುಗಿದುದಿಂದಿಗೆ ವೈರ ;
ಮುಗಿದುದಾ ಕದನ ಕಥೆ , ಮುಗಿದುದೆನ್ನಿರವು || ೩೧ ||

ಬಲದೇವ — ದುರ್ಯೋಧನ, ಒಂದು ಗಳಿಗೆಯ ಮಟ್ಟಿಗೆ ಮನಸ್ಸನ್ನು ಬಿಗಿಹಿಡಿದಿರು.

ದುರ್ಯೋಧನ — ಪೂಜ್ಯರು ಮಾಡುವುದೇನು ?

ಬಲದೇವ — ಕೇಳು,

ನೇಗಿಲಿನ ಮೊನೆಯಿಂದ ಮೈಯ ನೆರೆ ಕೊರೆಕೊರೆದು,
ಒನಕೆಯೇಟುಗಳಿಂದಲೆದೆಭುಜವನರೆದರೆದು,
ಪಾಂಡವರ ಹರಣಗಳನೊರಸುವೆನು , ಸ್ವರ್ಗಕ್ಕೆ
ಕಳುಹುವೆನು ನಿನಗವರನನುಚರರ ಮಾಡಿ || ೩೨ ||

ದುರ್ಯೋಧನ — ಆಗದು, ಪೂಜ್ಯರು, ಹಾಗೆನ್ನಲಾಗದು.

ಭೀಮ ಪೂಣ್ದುದ ನಡಸಿ, ನೂರ್ವರನುಜರು ಮಡಿದು,
ನಾನುಮಿಂತಾಗಿರಲು—ಕದನದಲಿ ಫಲವೇ ? || ೩೩ ||

ಬಲದೇವ — ನನ್ನ ಕಣ್ಣೆದುರಿನಲ್ಲಿಯೇ ನಿನ್ನನ್ನು ವಂಚಿಸಿದರಲ್ಲಾ ಎಂದು ನನಗೆ ರೋಷವುಂಟಾಯಿತು.

ದುರ್ಯೋಧನ — ನನ್ನನ್ನು ವಂಚಿಸಿದರೆಂದು ಪೂಜ್ಯರು ಭಾವಿಸುವಿರಾ ?

ಬಲದೇವ — ಸಂದೇಹವೇನು ?

ದುರ್ಯೋಧನ — ನನ್ನ ಪ್ರಾಣಗಳಿಗೆ ತಕ್ಕ ಬೆಲೆ ಸಂದಿರುವಂತೆಯೇ ನನಗೆ ತೋರುತ್ತದೆ. ಏಕೆಂದರೆ,

ಉರಿಮುಸಗಿ ಸುಡುವರಗುವನೆಯಿಂದ ಹೊರಹೊರಟು
ಬಂದಂದು ಮೊದಲಾಗಿ ಬುದ್ಧಿಬಲವೆಲ್ಲವನು
ಬೀರಿ ಹರಣವ ಹೊರೆದು ಯುದ್ಧದಲಿ ಬಲದೋರಿ
ವನದಲಿ ಹಿಡಿಂಬ ರಾಕ್ಷಸನಸುವನಾರಿಸಿದ
ಭೀಮನಿಗೆ ನಾನಿಂದು ಸೋತೆನೆಂದೆಣಿಸಿದಿರಾ ?
ಛಲದಿ ಸೋಲುವನಲ್ಲ. ಇಲ್ಲ, ನಾ ಸೋಲ್ತುದಿಲ್ಲ. ॥ ೩೪ ॥

ಬಲದೇವ — ಭೀಮಸೇನನು ನಿನ್ನನ್ನು ಯುದ್ಧದಲ್ಲಿ ವಂಚಿಸಿ **ಈಗಲೂ** ಬದುಕಿರುವನು.

ದುರ್ಯೋಧನ — ಏನು, ಭೀಮಸೇನನು ನನ್ನನ್ನು ವಂಚಿಸಿದನೆ ?

ಬಲದೇವ — ಹಾಗಾದರೆ ನಿನ್ನನ್ನು ಈ ಸ್ಥಿತಿಗೆ ತಂದವರಾರು ?

ದುರ್ಯೋಧನ — ಕೇಳಿ,

ಪಾರಿಜಾತವ ತಂದು ಸುರಪತಿಯ ಗರ್ವವನು
ಮುರಿದವನು, ದಿವ್ಯಸಾಸಿರ ವರುಷ ಸಾಗರದ
ನೀರಿನಲಿ ಲೀಲೆಯಿಂ ಪವಡಿಸಿದ ಶ್ರೀಹರಿಯು,
ಸರ್ವಲೋಕಪ್ರಿಯನು, ಭೀಮನಾ ಗದೆಯೊಳಗೆ
ತಾನಡಗಿ, ನಿರ್ವ್ಯಾಜ ಯುದ್ಧವನು ಮೆಚ್ಚಿರುವ
ನನ್ನನಿದೊ ಮೃತ್ಯುವಿಗೆ ಕೊಟ್ಟಿರುವನಿಂದು. ॥ ೩೫ ॥

(ತೆರೆಯಲ್ಲಿ)

ದೂರ ಸರಿಯಿರಿ, ಆರ್ಯರೆ, ದೂರ ಸರಿಯಿರಿ.

ಬಲದೇವ — (ಚೆನ್ನಾಗಿ ನೋಡಿ) ಓಹೋ, ಪೂಜ್ಯನಾದ ಧೃತರಾಷ್ಟ್ರನು ಗಾಂಧಾರಿಯಿಂದಲೂ ಅಂತಃಪುರ ಸ್ತ್ರೀಯರಿಂದಲೂ **ಕೂಡಿ,** ಶೋಕದಿಂದ ಕುಗ್ಗಿದ ಹೃದಯವುಳ್ಳವನಾಗಿ, ದುರ್ಜಯನು ದಾರಿ ದೋರಿಸುತ್ತಿರಲು ಇತ್ತಕಡೆಗೇ ಬರುತ್ತಿರುವನು. ಇವನು,

ನೂರ್ವರಣುಗರ ಕೂಡೆ ಕಣ್ಣಭಾಗಿಸಿಕೊಂಡು,
ಕನಕಯೂಪವ ನಗುವ ನಿಡುದೋಳುಗಳನಾಂತು,

ವೀರ್ಯಕಾಕರನೆನಿಸಿ, ದರ್ಪದಲಿ ಮಿಗಿಲೆನಿಸಿ
ಮೆರೆಯುವನು. ಸ್ವರ್ಗ ರಕ್ಷಣೆಗಾಗಿ ಬಲು ಬೆದರಿ,
ನೆಲದಿ ಜನಿಸುವ ಮೊದಲೆ ದೇವತೆಗಳರಿತಿಮಿರ
ದಿಂದಿವನ ಕಣ್ಣುಗಳನಿರಿದಿಹರು ! ಸತ್ಯವಹುದು. || ೩೬ ||

(ಆಮೇಲೆ ಧೃತರಾಷ್ಟ್ರ, ಗಾಂಧಾರಿ, ದೇವಿಯರು, ದುರ್ಜಯಂ—
ಇವರು ಪ್ರವೇಶಿಸುವರು)

**ಧೃತರಾಷ್ಟ್ರ** — ಮಗು, ಎಲ್ಲಿರುವೆಯಪ್ಪಾ !

**ಗಾಂಧಾರಿ** — ಮಗು, ಎಲ್ಲಿರುವೆಯಪ್ಪಾ !

**ದೇವಿಯರು** — ಮಹಾರಾಜ ! ಎಲ್ಲಿರುವೆ ?

**ಧೃತರಾಷ್ಟ್ರ** — ಅಯ್ಯೋ ! ಕಷ್ಟ, ಕಷ್ಟ !

ಮಗನಿಂದು ಯುದ್ಧದಲಿ ವಂಚನೆಗೆ ಬಲಿಯಾಗಿ
ಬಿದ್ದ ಸುದ್ದಿಯ ಕೇಳಿ ಕಣ್ಣಿನಲಿ ನೀರ್ ತುಂಬಿ
ಎನ್ನ ಜನ್ಮದ ಕುರುಡನಿಮ್ಮಡಿಸಿತು || ೩೭ ||

ಗಾಂಧಾರಿ, ನೀನು ಸಹಿಸಬಲ್ಲೆಯಾ ?

**ಗಾಂಧಾರಿ** — ಈ ಮಂದಭಾಗ್ಯೆಯು ಇನ್ನೂ ಜೀವಿಸಿರುವೆನು.

**ದೇವಿಯರು** — ಮಹಾರಾಜ ! ಮಹಾರಾಜ !

**ರಾಜ** — ಅಯ್ಯೋ ! ಕಷ್ಟ, ಕಷ್ಟ ! ನನ್ನ ಹೆಂಡಿರೂ ಅಳುವಂತಾಯಿತೇ ?

ಎನ್ನ ರಾಣಿಯರಿಂದು ಕೆದರಿರುವ ಕುರುಳಿಂದ
ರಂಗದಲಿ ಬಂದಿಹರು ! ಗದೆಯ ಪೆಟ್ಟಿನ ನೋವ
ನಾಗಳರಿಯೆನು ; ಈಗ ಮೊದಲರಿಯುತಿಹೆನು. || ೩೮ ||

**ಧೃತರಾಷ್ಟ್ರ** — ಗಾಂಧಾರಿ, ಕುಲಮಾನಿಯಾದ ದುರ್ಯೋಧನನು ಕಾಣಿಸುವನೆ ?

**ಗಾಂಧಾರಿ** — ಮಹಾರಾಜ, ಕಾಣುವುದಿಲ್ಲ.

ಧೃತರಾಷ್ಟ್ರ — ಏನು, ಕಾಣುವುದಿಲ್ಲವೆ? ಮಕ್ಕಳು ನನ್ನನ್ನು ಹುಡುಕಿಕೊಂಡು ಬರಬೇಕಾದ ಈ ಕಾಲದಲ್ಲಿ ಮಗನನ್ನೇ ಕಾಣೆನಲ್ಲಾ! ಅಯ್ಯೋ ಹಾಳು ಯಮ!

"ಮಾನ ವೀರ್ಯಗಳಿಂದ ತೊಳತೊಳಗಿ ಬೆಳಗುವರು,
ಕೊಳುಗುಳದಿ ರಿಪುದಳವ ಕತ್ತರಿಸಿ ಕೆಡಹುವರು,
ವೀರ ಧೀರರು" ಎನಿಪ ನೂರ್ವರಣುಗರ ಪಡೆದು;
ಆ ಸುತರು ಕೈಯೆತ್ತಿ ಕೊಡುವ ತರ್ಪಣ ಜಲವ
ನೊಮ್ಮೆಯಾದರು ನಲಿದು ಭೋಗಿಸುವ ಭಾಗ್ಯವನು
ಪಡೆಯನೇ ಧೃತರಾಷ್ಟ್ರ?— ಯೋಗ್ಯನಲ್ಲವೆ ದುಃಖಿ
ಧೃತರಾಷ್ಟ್ರನದಕೆ? || ೩೯ ||

ಗಾಂಧಾರಿ — ಮಗೂ ಸುಯೋಧನ, ನನಗೆ ಉತ್ತರಕೊಡು. ನೂರು ಮಕ್ಕಳನ್ನೂ ಕಳೆದುಕೊಂಡು ದುಃಖಪಡುತ್ತಿರುವ ಮಂದಭಾಗ್ಯನಾದ ಮಹಾರಾಜನನ್ನು ಸಮಾಧಾನಪಡಿಸು.

ಬಲದೇವ — ಇಗೋ ಪೂಜ್ಯಳಾದ ಗಾಂಧಾರಿ. ಈಕೆಯು,

ಪುತ್ರ ಪೌತ್ರರ ಮುಖವ ನೋಡುವಾಸೆಯ ತೊರೆದು
ಕಂಗಳನು ಕಟ್ಟಿದಳು ಪತಿಯನನುಕರಿಸಿ.
ಇಂದು ದುರ್ಯೋಧನನು ಕಾಣದಿರಲೆದೆಗುಂದಿ
ಕಣ್ಣೀರನೆಡೆಬಿಡದೆ ಸುರಿಸುವಳು; ಸುರಿಸುರಿಸಿ
ನೆನಸಿದಳು ಕಣ್ಣ ಪಟ್ಟಿಯನು. || ೪೦ ||

ಧೃತರಾಷ್ಟ್ರ — ಮಗೂ ದುರ್ಯೋಧನ, ಅಷ್ಟಾದಶಾಕ್ಷೌಹಿಣೀ ಮಹಾರಾಜ, ಎಲ್ಲಿರುವೆ?

ರಾಜ — ಈಗ ಮಹಾರಾಜನಾದೆ!

ಧೃತರಾಷ್ಟ್ರ — ಪುತ್ರಶತಜ್ಯೇಷ್ಠ, ಉತ್ತರಕೊಡು.

ರಾಜ — ಬೇರೊಂದು ವೃತ್ತಾಂತವನ್ನು ಹೇಳಬೇಕಾಗಿರುವುದು. ಅದನ್ನು ಹೇಳಲು ನನಗೆ ಬಹಳ ನಾಚಿಕೆಯಾಗುತ್ತಿರುವುದು.

**ಧೃತರಾಷ್ಟ್ರ** — ಬಾ, ಮಗು, ನನಗೆ ನಮಸ್ಕರಿಸು.

**ರಾಜ** — ಇಗೋ ಬಂದೆ ಬಂದೆ, (ಏಳುವುದನ್ನು ನಟಿಸಿ ಬೀಳುತ್ತಾನೆ). ಅಯ್ಯೋ, ಇದೇ ನನಗೆ ಎರಡನೆಯ ಪೆಟ್ಟು! ಕಷ್ಟ ಕಷ್ಟ!

ಈಗ ಗುರುವಿಗೆ ನಮಿಪ ಶಕ್ತಿಯನು ಆಗಲೇ
ಕಸಿದುಕೊಂಡನು ಭೀಮ ತೊಡೆಗಳಿಗೆ ಹೊಡೆದು. ॥ ೪೧ ॥

**ಗಾಂಧಾರಿ** — ಇಲ್ಲಿ ಬನ್ನಿ, ಮಕ್ಕಳಿರಾ.

**ದೇವಿಯರು** — ಅಮ್ಮಾ ಬಂದೆವು

**ಗಾಂಧಾರಿ** – ಪತಿಯನ್ನು ಹುಡುಕಿರಿ

**ದೇವಿಯರು** — ಮಂದಭಾಗ್ಯೆಯು ಹೊರಡುತ್ತೇನೆ.

**ಧೃತರಾಷ್ಟ್ರ** — ಇದು ಯಾರು, ನನ್ನ ಬಟ್ಟೆಯ ಸೆರಗನ್ನು ಹಿಡಿದೆಳೆಯುತ್ತ ದಾರಿ ತೋರಿಸುವವರು?

**ದುರ್ಜಯ** — ಅಜ್ಜ ನಾನು, ದುರ್ಜಯ

**ಧೃತರಾಷ್ಟ್ರ** — ಮಗೂ ದುರ್ಜಯ, ಅಪ್ಪನನ್ನು ಹುಡುಕು.

**ದುರ್ಜಯ** — ನನಗೆ ದಣಿವಾಗುತ್ತೆ, ಅಜ್ಜ

**ಧೃತರಾಷ್ಟ್ರ** — ಹೋಗು ಮಗು, ಅಪ್ಪನ ತೊಡೆಯಮೇಲೆ ವಿಶ್ರಮಿಸಿಕೊಳ್ಳುವೆಯಂತೆ

**ದುರ್ಜಯ** — ಅಜ್ಜ, ಇಗೋ ಹೊರಟೆ (ಹತ್ತಿರ ಹೋಗಿ) ಅಪ್ಪಾ! ಎಲ್ಲಿದೀಯ?

**ರಾಜ** — ಇವನೂ ಬಂದಿರುವನು! ಎಲ್ಲ ಅವಸ್ಥೆಗಳಲ್ಲಿಯೂ ಹೃದಯಕ್ಕೆ ಹತ್ತಿರವಾಗಿರುವ ಪುತ್ರಸ್ನೇಹವು ನನ್ನನ್ನು ಸುಡುತ್ತಿರುವುದು. ಏಕೆಂದರೆ—

ದುಗುಡಗಳ ಸೋಂಕರಿಯನೀಹಸುಳೆ ದುರ್ಜಯನು,
ಎನ್ನಂಕದಲಿ ಮಲಗಿ ನಿದ್ರಿಸಲು ತಕ್ಕವನು.
ನಾನಿಂತು ಸೋತುದನು ಕಾಣುತಿವನೇನೆಂಬನೋ! ॥ ೪೨ ॥

ದುರ್ಜಯ — ಓಹೋ ! ಮಹಾರಾಜ ನೆಲದಮೇಲೆ ಕೂತಿದ್ದಾನೆ !

ದುರ್ಯೋಧನ — ಮಗೂ, ಇಲ್ಲಿಗೇಕೆ ಬಂದೆ ?

ದುರ್ಜಯ — ನೀನು ತಡಮಾಡಿದ್ದರಿಂದ.

ದುರ್ಯೋಧನ — ಅಯ್ಯೋ ! ಈ ಅವಸ್ಥೆಯಲ್ಲಿಯೂ ಪುತ್ರಸ್ನೇಹವು ನನ್ನ ಹೃದಯವನ್ನು ಸುಡುತ್ತಿರುವುದಲ್ಲಾ !

ದುರ್ಜಯ — ಅಪ್ಪಾ, ನಿಂತೊಡೇಮೇಲೆ ಕೂತುಕೊತೇನೆ.

(ತೊಡೆಯ ಮೇಲೆ ಹತ್ತುತ್ತಾನೆ)

ದುರ್ಯೋಧನ — (ಹತ್ತದಂತೆ ತಡೆದು) ದುರ್ಜಯ ! ದುರ್ಜಯ ! ಅಯ್ಯೋ ! ಕಷ್ಟ !

ಹೃದಯದೊಲವಿನ ಮೂಲ, ಕಂಗಳ ಮಹೋತ್ಸವವು
ಕಂದ ಚಂದಿರನು. ಕಾಲ ಬದಲಿಸಲಿಂದು
ಈ ಪರಿಯ ಚಂದಿರನೆ ಬೆಂಕಿಯಾಗಿಹನು. ॥ ೪೩ ॥

ದುರ್ಜಯ — ಯಾಕಪ್ಪಾ, ತೊಡೆಯ ಮೇಲೆ ಕೂರದಂತೆ ತಡೆಯೋದು ?

ದುರ್ಯೋಧನ — ಅರಿತ ಈ ಆಸನವ ತೋರೆ ನೀನು ಮಗುವೆ.

ಎಲ್ಲಿ ದೊರೆವುದೊ ಅಲ್ಲಿ ನೀ ಕೂರು ಮಗುವೆ.
ಮೊದಲು ನೀನುರೆ ನಲಿದ ಎನ್ನಂಕಪೀಠ
ಇಲ್ಲಿಂದ ಮುಂದೆ ನಿನಗಿಲ್ಲ ಮಗುವೆ. ॥ ೪೪ ॥

ದುರ್ಜಯ — ಮಹಾರಾಜ, ಹಾಗಾದರೆ ನೀನು ಹೋಗುವುದೆಲ್ಲಿಗೆ ?

ರಾಜ — ನೂರುಜನ ತಮ್ಮಂದಿರೂ ಎಲ್ಲಿಗೆ ಹೋದರೋ ಅಲ್ಲಿಗೆ.

ದುರ್ಜಯ — ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗು.

ರಾಜ — ಹೋಗು ಮಗು, ವೃಕೋದರನನ್ನು ಕೇಳು.

ದುರ್ಜಯ — ಮಹಾರಾಜ, ಬಾ. ನಿನ್ನ ಹುಡುಕುತ್ತಿದಾರೆ.

ರಾಜ — ಯಾರು, ಮಗು ?

ದುರ್ಜಯ — ಅಜ್ಜ, ಅಜ್ಜಿ, ಅಮ್ಮ, ಎಲ್ಲರೂ.

ರಾಜ — ಹೋಗು ಮಗು, ನಾನು ಬರಲಾರೆ

ದುರ್ಜಯ — ನಾ ನಿನ್ನ ಎತ್ತಿಕೊಂಡು ಹೋಗುತೀನೆ.

ರಾಜ — ಮಗು, ನೀನಿನ್ನೂ ಚಿಕ್ಕವನು.

ದುರ್ಜಯ — (ಮುಂದೆ ಹೋಗಿ) ಆರ್ಯರೇ ಇಲ್ಲಿ ಮಹಾರಾಜ

ದೇವಿಯರು — ಹಾ ! ಹಾ ! ಮಹಾರಾಜ !

ಧೃತರಾಷ್ಟ — ಎಲ್ಲಿ, ಮಹಾರಾಜ ?

ಗಾಂಧಾರಿ — ಎಲ್ಲಿ ಆ ನನ್ನ ಮಗನು ?

ದುರ್ಜಯ — ಇಲ್ಲಿ, ಮಹಾರಾಜ. ನೆಲದಮೇಲೆ ಕೂತಿದಾನೆ !

ಧೃತರಾಷ್ಟ — ಅಯ್ಯೋ ! ಇವನೇ ಆ ಮಹಾರಾಜನು !

ಕಾಂಚನಸ್ತಂಭದಂತೌನ್ನತ್ಯವನು ತಳೆದು,
ಲೋಕವೆಲ್ಲವನಾಳ್ವ ಚಕ್ರವರ್ತಿಯು ಎನಿಸಿ
ಬಾಳಿದೆನ್ನೀ ಮಗನು ನೆಲಕುರುಳಿ ತಪಿಸುವನು !
ಬಾಗಿಲಗುಳಿಯೊಳರ್ಧ ಮುರಿದಂತೆ ಕೆಡೆದಿರುವನು ! ॥ ೪೫ ॥

ಗಾಂಧಾರಿ — ಮಗೂ ದುರ್ಯೋಧನ, ಬಹು ಬಳಲಿದೆಯಪ್ಪಾ !

ರಾಜ — ಅಮ್ಮಾ, ನಾನು ನಿನ್ನ ಮಗನಲ್ಲವೆ ?

ಧೃತರಾಷ್ಟ — ಯಾರೀಕೆ ?

ಗಾಂಧಾರಿ — ಮಹಾರಾಜ, ನಾನು. ಭೀತಿಯ ಗುರುತರಿಯದ ಮಕ್ಕಳನ್ನು ಪಡೆದವಳು.

ರಾಜ — ನಾನು ಈಗ ಹೊಸದಾಗಿ ಹುಟ್ಟಿದಂತೆ ಭಾವಿಸುತ್ತೀನೆ. ತಾತ, ಈ ಕಳವಳದಿಂದ ಫಲವೇನು ?

ಧೃತರಾಷ್ಟ — ಮಗನೇ, ಹೇಗೆ ಕಳವಳಗೊಳ್ಳದಿರಲಿ ?

ವೀರ್ಯದಲಿ ಮಿಗಿಲೆನಿಸಿ, ಯುದ್ಧದೀಕ್ಷಿತರಾಗಿ
ನೂರ್ವರನುಜರು ಮೊದಲೆ ಮಡಿದು ನೀನುಳಿದಿರುವೆ.
ನೀನೊರ್ವನಳಿವಂದು ನಮಗುಳಿವುದೇನು ? ॥ ೪೬ ॥

(ಬೀಳುವನು)

ರಾಜ — ಅಯ್ಯೋ ! ಪೂಜ್ಯನು ಬಿದ್ದುಬಿಟ್ಟನು. ತಾತ, ಈ ಪೂಜ್ಯಳನ್ನು ಸಮಾಧಾನಪಡಿಸು.

ಧೃತರಾಷ್ಟ್ರ — ಏನೆಂದು ಸಮಾಧಾನಪಡಿಸಲಪ್ಪಾ !

ರಾಜ — ಯುದ್ಧದಲ್ಲಿ ಬೆನ್ನು ತೋರಿಸದೆ ಮಡಿದನೆಂದು. ತಾತ, ಈ ಶೋಕವನ್ನು ನಿಗ್ರಹಿಸಿಕೊಂಡು ನನ್ನನ್ನು ಅನುಗ್ರಹಿಸು.

ನಿಮ್ಮಡಿಗೆ ನಮಿಸಿದೀ ಶಿರವನನ್ಯರ ಮುಂದೆ—
ಉರಿವಗ್ನಿಗಾದರೂ—ಬಾಗಿಸದೆ ಬಾಳಿದೆನು.
ಮಾನದಿಂದೊಡಗೂಡಿ ಜನಿಸಿದೆನು. ಆ ಮಾನ
ದೊಡನೆಯೇ ನಾನಿಂದು ಸ್ವರ್ಗಕೇರುವೆನು. ॥ ೪೭ ॥

ಧೃತರಾಷ್ಟ್ರ — ಹುಟ್ಟುವಾಗಲೆ ಕಣ್ಣು ಮುಚ್ಚಿದುವು. ಮುದಿತನವು
ಹೆಚ್ಚಿದುದು. ಜೀವಿತದೊಳಾಸೆಯೇ ಇಲ್ಲವೆನಗೆ.
ಈ ಪರಿಯ ಮುದಿತನದಿ ತಾಳಲಾರದ ಪುತ್ರ
ಶೋಕದುರಿ ಹೃದಯವನು ಕೊರೆಯುವುದು , ಧೈರ್ಯವನು
ಪುಡಿಮಾಡಿ ಹುಡಿಗೂಡಿ ಬಲು ಬೆಳೆಯುತಿಹುದು. ॥ ೪೮ ॥

ಬಲದೇವ — ಕಷ್ಟ, ಕಷ್ಟ !

ಎಂದೆಂದಿಗೂ ಬೆಳಕು ಹೊಳೆಯದಿಹ ಕಣ್ಣಾಂತು
ದುರ್ಯೋಧನನ ಜೀವದಾನೆಯನೆ ತೊರೆದಿರುವ
ಪೂಜ್ಯ ಧೃತರಾಷ್ಟ್ರನಿಗೆ ಮೊಗದೋರಲಾರೆ. ॥ ೪೯ ॥

ರಾಜ — ಅಮ್ಮ, ನನ್ನದೊಂದು ವಿಜ್ಞಾಪನೆ.

ಗಾಂಧಾರಿ — ಹೇಳು, ಮಗು.

ರಾಜ — ನಮಿಸಿ ನಾ ಬೇಡುವೆನು. ಪುಣ್ಯವನು ಮಾಡಿಹೆನೆ
ಜನ್ಮ ಜನ್ಮದಿ ನೀನೆ ತಾಯಾಗು ನನಗೆ. ॥ ೫೦ ॥

ಗಾಂಧಾರಿ — ನನ್ನ ಅಪೇಕ್ಷೆಯನ್ನೇ ನೀನೂ ನುಡಿದೆ.

ರಾಜ — ಮಾಲವಿ, ನೀನೂ ಕೇಳು,

ಅಡಿಗಡಿಗೆ ಬಲ್ಗದೆಯ ಹೊಡೆತವನು ತಡೆದೆನ್ನ
ಹುಬ್ಬುಗಂಟೊಡೆದಿಹುದು. ಯುದ್ಧಕಾಲದಲೆದೆಗೆ
ಬಿದ್ದಾ ಪ್ರಹಾರಗಳು ರಕ್ತವನು ಹೊರಸೂಸಿ
ಚೆಲ್ಲಿಸಲು ಹಾರಕವಕಾಶವೇ ದೊರೆಯದಾಯ್ತು.
ನೋಡಿಲ್ಲಿ ಗಾಯಗಳ ಹೊನ್ನ ತೋಳ್ಬಂದಿಗಳ
ತಳೆದು ತೊಳತೊಳಗುತಿರುವೀಯೆನ್ನ ಭುಜಗಳನು.
ನಿನ್ನ ಪತಿ ಯುದ್ಧದಲಿ ಬೆಂಗೊಡದೆ ಹೊಡೆದಾಡಿ
ಮಡಿದಿಹನು. ಏಕಿಂತು ಕ್ಷತ್ರಿಯೆಯೆ ರೋದಿಸುವುದು ?
॥ ೫೧ ॥

ದೇವಿ — ಸಹಧರ್ಮಚಾರಿಣಿಯಾಗಿ ಬಾಲೆಯಾಗಿರುವ ನಾನು ಅಳದಿರುವುದು ಹೇಗೆ ?

ರಾಜ — ಪೌರವಿ, ನೀನೂ ಕೇಳು,

ವೇದೋಕ್ತವಿಧಿಯಿಂದ ವಿಧ ವಿಧದ ಯಜ್ಞಗಳ
ಮನವೊಲ್ದು ಮಾಡಿದೆನು. ಬಾಂಧವರ ಸಾಕಿದೆನು.
ಶತ್ರುಗಳ ತಲೆಮೆಟ್ಟಿ ನಿಂದೆನಾಶ್ರಿತ ಜನದ
ನೂರಾರಭೀಷ್ಟಗಳ ಸಲ್ಲಿಸುತ ತಣಿಸಿದೆನು.
ಯುದ್ಧದಲಿ ಹದಿನೆಂಟು ಸಂಖ್ಯೆಯಕ್ಷೋಹಿಣಿಯ
ನರಪತಿಗಳೆಲ್ಲರನು ದಣಿಸಿ ಸಂತಪಿಸಿದೆನು.
ಇಂತೆನ್ನ ಮಾನವನು ನೋಡಿ, ಮಾನಿನಿ, ಹೇಳು
ಗೋಳಿಡುವುದುಚಿತವೇ ? ಅಳುವರೇ ಇಂಥವರ
ಪತ್ನಿಯರು ಈ ಪರಿಯಲಿ ? ॥ ೫೨ ॥

ಪೌರವಿ — ಸಹಗಮನಮಾಡುವ ನಿಶ್ಚಯವುಳ್ಳವಳಾಗಿ ಇನ್ನು ಅಳುವುದಿಲ್ಲ.

ರಾಜ — ದುರ್ಜಯ, ನೀನೂ ಕೇಳು.

ಧೃತರಾಷ್ಟ್ರ — ಗಾಂಧಾರೀ, ಇವನೇನು ಹೇಳಬಹುದು !

ಗಾಂಧಾರಿ — ನಾನೂ ಅದನ್ನೇ ಯೋಚಿಸುತ್ತಿದ್ದೇನೆ.

ರಾಜ — ನನ್ನನ್ನು ಹೇಗೋ ಹಾಗೆ ಪಾಂಡವರನ್ನು ಶುಶ್ರೂಷೆಮಾಡು. ತಾಯಿ ಕುಂತಿಯ ಅಪ್ಪಣೆಯಂತೆ ನಡೆದುಕೊ. ಅಭಿಮನ್ಯುವಿನ ತಾಯಿಯನ್ನೂ ದ್ರೌಪದಿಯನ್ನೂ ತಾಯಿಯಂತೆ ಪೂಜಿಸು. ನೋಡು, ಮಗು .

"ಅಭಿಮಾನದೀಪ್ತಹೃತ್ಪದ್ಮ ದುರ್ಯೋಧನನು,
ಶ್ಲಾಘ್ಯಸಂಪದ್ಯುತನು ಮತ್ಪಿತನು ಯುದ್ಧದಲಿ
ಸಮಬಲನ ಸೆಣಸುತ್ತ ತನುದೊರೆದನಂ" ದೆಣಿಸಿ
ಈ ಪರಿಯ ದುಗುಡವನು ತೊರೆಯುವುದು ಮಗನೆ.
ಅಳಿದೆನಗೆ ಪಾಂಡವರು ತರ್ಪಣವ ಕೊಡುವಂದು
ಎಲೆ ಮಗು, ಯುಧಿಷ್ಠಿರನ ಬಳಿಸಾರು ನೀನವನ
ಉರುವ ಭುಜದೊತ್ತಿನಲಿ ವೈಗೆ ವೈ ಸೋಂಕುವೊಲು
ಕುಳಿತು ನೀಡೆನಗೊಲಿದು ತರ್ಪಣದ ಜಲವ. || ೫೩ ||

ಬಲದೇವ — ಓಹೋ, ವೈರವು ಪಶ್ಚಾತ್ತಾಪವಾಗಿ ಪರಿಣಮಿಸಿತು! ಏನೋ ಸದ್ದಾಗುವಂತಿದೆ—

ಸನ್ನಾಹದುಂದುಭಿಯ ಸದ್ದಡಗಿ ರಣರಂಗ
ಮೌನದಲಿ ಮಲಗಿಹುದು, ಛತ್ರಚಾಮರ ಕವಚ
ಬಾಣಗಳು ಚೆಲ್ಲಿಹವು; ಸೂತಯೋಧರು ಮಡಿದು
ಬಿದ್ದಿಹರು ರಣದಿ. ಈ ಪರಿಯ ವೊಳ್ತಿನಲಿ
ಬಿಲ್ಲ ರೇಂಕರಿಸುತ್ತ ಹದ್ದುಗಳ ಗುಂಪುಗಳ
ನಾಗಸಕೆ ಹಾರಿಸುತ ಚೆದರಿಸುತ ಬರುವನಾರು? || ೫೪ ||

(ತೆರೆಯಲ್ಲಿ)

ಮುನ್ನ ದುರ್ಯೋಧನನು ಬಿಲ್ಲ ಹೆದೆಯೇರಿಸುತ
ಯುದ್ಧ ಯಜ್ಞಕೆ ತೊಡಗಲವನ ಕೂಡಿದೆನು.
ಮುಗಿಯದೇ ಮಿಕ್ಕಶ್ವಮೇಧವನು ಮುಗಿಸಲ್ಕೆ
ತೊಡಗುವಧ್ವರ್ಯುವೊಲು ಮತ್ತೊಮ್ಮೆ ತೊಡಗುವೆನು
ಮುನ್ನವೇ ನಾ ನೋಂತ ರಣಯಜ್ಞಕಿಂದು. || ೫೫ ||

**ಬಲದೇವ** — ಓಹೋ! ಗುರುಪುತ್ರನಾದ ಅಶ್ವತ್ಥಾಮನು ಇತ್ತಕಡೆಗೇ ಬರುತ್ತಿರುವನು. ಇವನು,

ಬಿರಿದ ತಾವರೆಯೆಸಳ ವಿಸ್ತಾರವನು ಜರಿವ
ಕಂಗಳನು ತೆರೆದಿಹನು. ಹೊನ್ನ ಯೂಪವ ನಗುವ
ನಿಡುದೋಳ ತೂಗಿಸುತ ತೂಗಿಸುತ ಬರುತಿಹನು.
ಉಗ್ರಕಾರ್ಮುಕವೊಂದ ರಭಸದಿಂದೆಳೆಯುವನು.
ಕಾಳ್ಕಿಚ್ಚನೊಡಲಿನಲಿ, ಮಳೆಬಿಲ್ಲ ಕೋಡಿನಲಿ
ತಳೆದ ಮೇರುವಿನಂತೆ ತೋರುತಿಹನಿವನು. || ೩೬ ||

(ಬಳಿಕ ಅಶ್ವತ್ಥಾಮನು ಪ್ರವೇಶಿಸುತ್ತಾನೆ)

**ಅಶ್ವತ್ಥಾಮ** — (ಮೊದಲು ಹೇಳಿದ್ದನ್ನೇ ಹೇಳಿ)

*(ಕೊಳುಗುಳದ ಬಿರುಗಾಳಿ ಬೀಸುತಿರಲಿರ್ಕಡೆಯ
ಪಡೆಗಡಲು ಕುದಿದುಬ್ಬಿ ಕೂಡುವಂದುದ್ಭವಿಸಿ
ಹರಿದ ಶಸ್ತ್ರಗಳೆಂಬ ಮೊಸಳೆಗಳ ಬಳಗಕ್ಕೆ
ಬಲಿಬಿದ್ದ ತನುವಾಂತ ಪಾರ್ಥಿವರೆ ಕೇಳಿ!
ಅರೆಜೀವದಿಂದುಸಿರನೆಳೆಯುವರೆ ಕೇಳಿ!
ಕಾಳಗದಿ ಹೆಸರಾಂತ ದೊರೆಗಳಿರ ಕೇಳಿ!
ನುಡಿವೆನಶ್ವತ್ಥಾಮ, ಕಿವಿಗೊಟ್ಟು ಕೇಳಿ!)
ಛಲಗುಂದಿ ಬಲಗುಂದಿ ತೊಡೆಯುಡಿದು ಕೆಡೆದಿರುವ
ಕೌರವೇಶ್ವರನಲ್ಲ. ಅಸ್ತ್ರಶಸ್ತ್ರಗಳೆಲ್ಲ
ವಿಫಲವಾಗಲು ಬರಿದೆ ಭಾರದಲಿ ಬಳಲಿದಾ
ಸೂತಸುತನಲ್ಲ. ಕೈಯೊಳಗೆ ಬಿಲ್ಲಾಂತು
ಸಮರಭೂಮಿಗೆ ಬಂದು—ರಭಸದಿಂದಲಿ ಬಂದು—
ನಿಂದಿರುವೆನಿಂದು. ಒರ್ವನೇ ಕಾದುವೆನು,
ಒರ್ವನೇ ಕದನದಲಿ ವಿಜಯವನು ಸಾಧಿಪೆನು,
ಒರ್ವನೇ ಕಾದುವೆನು, ದ್ರೋಣಸುತ ನಾನು. || ೩೭ ||

---

*ಈ ಭಾಗವು ಮೂಲದಲ್ಲಿ ಗದ್ಯದಲ್ಲಿಯೇ ಇದೆ.

ಶ್ಲಾಘನೆ ದೊರೆಯದ ವಿಜಯದಿಂದ ಫಲವೇನು? (ಮುಂದೆ ನಡೆದು) ಆಗದು, ಹೀಗೆನ್ನಲಾಗದು. ನಾನು ತಂದೆಗೆ ತರ್ಪಣಕೊಡಲು ತೊಡಗಿ ಉಳಿದುದೆಲ್ಲವನ್ನೂ ಮರೆತ ಸಮಯದಲ್ಲಿಯೇ ಕುರು ಕುಲಕ್ಕೆ ತಿಲಕನೆನಿಸಿದ ದುರ್ಯೋಧನನು ವಂಚನೆಗೆ ಗುರಿ ಯಾದನು ! ಯಾರು ತಾನೇ ಇದನ್ನು ನಂಬಿಯಾರು ?

ಆನೆ ತೇರುಗಳೇರಿ ಬಿಲ್ಲುಬಾಣವ ಹಿಡಿದು
ಹನ್ನೊಂದು ಪಡೆಯರಸರೆಲ್ಲ ಕೈಮುಗಿದೆತ್ತಿ
ಕುರುರಾಜನಾಣತಿಗೆ ಕಾದು ನಿಂದರು. ಜೊತೆಗೆ,
ಪರಶುರಾಮನ ಬಾಣ ಕವಿದ ಕವಚವನಾಂತ
ಭೀಷ್ಮನೂ ತಾತನೂ ಭಟರಾಗಿ ಕಾದಿದರು
ತಾನೆ ಅತಿರಥನಾಗಿ ಇಂತು ಸಂಪದವಾಂತ
ರಾಜ ದುರ್ಯೋಧನನೆ ಸೋತನಿಂದು ;
ಕಾಲವಶದಿಂದಿವನು ಸೋತನಿಂದು. ॥ ೫೮ ॥

ಗಾಂಧಾರೀಪುತ್ರನಾದ ದುರ್ಯೋಧನನು ಈಗೆಲ್ಲಿರಬಹುದು ? (ಮುಂದೆ ಹೋಗಿ, ಸುತ್ತಲೂ ನೋಡಿ) ಸಮರದಲ್ಲಿ ಮಡಿದ ಆನೆ ಕುದುರೆ ಮನುಷ್ಯರೂ, ಮುರಿದ ರಥಗಳೂ ಪ್ರಾಕಾರದಂತೆ ಬಿದ್ದಿರಲು, ಈ ಪ್ರಾಕಾರದ ನಡುವೆ ಸಮರಸಾಗರದ ತೀರವನ್ನು ಸೇರಿದ ಕುರು ರಾಜನು ಗೋಚರಿಸುತ್ತಿರುವನು. ಇವನು,

ಮುಕುಟ ಕೆಳಗುರುಳಿರಲು ಚಲಿಸುತಿಹ ಕುರುಳುಗಳ
ಕಿರಣಗಳ ತಳೆದಿಹನು. ಗದೆಯ ಗಾಯದ ರಕ್ತ
ಸುರಿದಿರಲು ಮೈ ನೆನೆದು ಕೆಂಪಾಗಿ ತೋರುವನು.
ಸಂಜೆಯಾಲಿಂಗಿಸಲು ಅಸ್ತಗಿರಿಶಿರವೇರಿ
ನಿಂದ ಪಶ್ಚಿಮಕಾಲಸೂರ್ಯನಂತಸ್ತಮಿಪನು. ॥ ೫೯ ॥

(ಸಮೀಪಕ್ಕೆ ಹೋಗಿ) ಕುರುರಾಜ, ಇದೇನು ?

ರಾಜ — ಗುರುಪುತ್ರ, ಅಸಂತೃಪ್ತಿಯ ಫಲವಿದು.

ಅಶ್ವತ್ಥಾಮ — ಕುರುರಾಜ, *ನಿನ್ನ ಪರಾಭವಕ್ಕೆ ಕಾರಣರಾದವರನ್ನು ನಿರ್ಮೂಲ ಮಾಡುತ್ತೇನೆ.

ರಾಜ — ನೀನೇನು ಮಾಡುವೆ ?

ಅಶ್ವತ್ಥಾಮ — ಕೇಳು,

ಪಾಂಡವರ ರಕ್ಷಿಸಲು ಶಾರ್ಙ್ಗಚಕ್ರಾದಿಗಳ
ನಾಲ್ಕು ತೋಳಲಿ ತಳೆದು, ಗರುಡವಾಹನನಾಗಿ
ಕೃಷ್ಣನೇ ಕದನಕ್ಕೆ ಕೈದುಡುಕಿ ಬಂದರೂ
ಪಾಂಡವರ ಬಡಿಯುವೆನು ; ಕೃಷ್ಣನನೆ ಕಡಿಯುವೆನು.
ಕಣೆಗಳಿಂದೆಲ್ಲರನು ಕಡಿಕಡಿದು ಕಲಸುವೆನು,
ಮಸಿಬಳಿದ ಪಟದಂತೆ ಕಲಸಿ ಬಿಸುಡುವೆನು. ॥ ೬೦ ॥

ರಾಜ — ಬೇಡ, ಬೇಡ ಹಾಗೆನ್ನಬೇಡ.

ತಾಯಿ ಪೊಡವಿಯ ತೊಡೆಯಮೇಲೆ ಮಡಿದುರುಳಿದರು
ದೊರೆ ದೊರೆಗಳೆಲ್ಲ. ಕರ್ಣ ನಡೆದನು ದಿವಕೆ ;
ಭೀಷ್ಮ ಕೆಡೆದನು ನೆಲಕೆ. ಮುನ್ನ ಮಡಿದರು ನನ್ನ
ನೂರ್ವರನುಜರು ರಣದಿ ಕೆಣಕಿದರ ಸೆಣಸಿ.
ನೋಡು ಗುರುಸುತ, ಕಡೆಗೆ ನನಗವಿಾಗತಿಯಾಯ್ತು !
ಬಿಲ್ಲ ಬಿಡು. ಹಿಡಿಯದಿರು ನೀನಿನ್ನು ಮುಂದೆ. ॥ ೬೧ ॥

ಅಶ್ವತ್ಥಾಮ — ಕುರುರಾಜ,

ಗದೆಯ ಕದನದಿ ಭೀಮ ತೊಡೆಗಳನು ಕಡಿದಂದೆ
ನಿನ್ನ ದರ್ಪವ ಬಿಡದೆ ಹುಡಿಗೂಡಿಸಿದನೆ ? ॥ ೬೨ ॥

ರಾಜ — ಆಗದು, ಹೀಗಾಗದು. ರಾಜರು ಮಾನಶರೀರರು. ಮಾನಕ್ಕಾಗಿಯೇ ನಾನು ನಿಗ್ರಹವನ್ನು ಪಡೆದೆ. ಗುರುಪುತ್ರ, ನೋಡು,

---

*ಸತ್ಕಾರ ಮೂಲಮಾವರ್ಜಯಿಷ್ಯಾಮಿ—ಇಲ್ಲಿ ಮೊದಲು ಆ ಕಾರವು ಬಿಟ್ಟು ಹೋಗಿರಬೇಕೆಂದೂಹಿಸಿ 'ಅಸತ್ಕಾರ....' ಎಂಬ ಪಾಠವನ್ನಿಟ್ಟುಕೊಂಡು ಅರ್ಥ ಮಾಡಿದ್ದೇನೆ.

ಸ್ಮರಿಸು ಜೂಜಿನಲಂದು ದ್ರೌಪದಿಯ ಮುಡಿವಿಡಿದು
ಸಭೆಗೆಳಸಿ ತಂದುದನು. ಬಳಿಕ ಚಿಕ್ಕವನೆಂದು
ನೋಡದಭಿಮನ್ಯುವನು ರಣದಿ ಕೊಂದುದನು.
ಸ್ಮರಿಸು ಪಾಂಡವರೊಡನೆ ಪಗಡೆಯಾಟವನಾಡಿ
ಸೋಲಿಸುತ ನಾವವರ ಕಾಡಿಗಟ್ಟಿದುದ;
ಸ್ಮರಿಸು ವನಮೃಗಗಳಂತವರು ಬಾಳಿದುದ.
ಅವರೆನಗೆ ಮಾಡಿದುದನಿದರೊಡನೆ ಹೋಲಿಸಲು
ಅತ್ಯಲ್ಪವೆನಿಸುವುದು ಗುರುಪುತ್ರ, ಮನ್ನಿಸವರ. ॥ ೬೩ ॥

ಅಶ್ವತ್ಥಾಮ — ಏನೇ ಆಗಲಿ, ಪ್ರತಿಜ್ಞೆಮಾಡಿಬಿಟ್ಟೆ.

ನಿನ್ನಾಣೆ, ನನ್ನಾಣೆ, ವೀರಲೋಕಗಳಾಣೆ ;
ಇರುಳು ಕದನವ ಹೂಡಿ ಸುಡುವೆ ಪಾಂಡವರ ॥ ೬೪ ॥

ಬಲದೇವ — ಗುರುಪುತ್ರನಾಡಿದ ಮಾತು ನಡೆದೇ ನಡೆಯುವುದು

ಅಶ್ವತ್ಥಾಮ — ಪೂಜ್ಯ ಹಲಾಯುಧರೂ ಇಲ್ಲಿರುವರು !

ಧೃತರಾಷ್ಟ್ರ — ಅಯ್ಯೋ, ವಂಚನೆಗೆ ಸಾಕ್ಷಿ ಬೇರೆ ಬೇಕಾಯಿತೇ ?

ಅಶ್ವತ್ಥಾಮ — ದುರ್ಜಯ, ಇಲ್ಲಿ ಬಾ.

ತಂದೆ ತೋಳ್ಬಲದಿಂದ ಗಳಿಸಿದೀ ರಾಜ್ಯದಲಿ
ಅಭಿಷೇಕವಿರದೊಡಂ ನೀನೆ ದೊರೆಯಾಗು ;
ವಿಪ್ರವಚನಗಳಿಂದ ರಾಜನಾಗು. ॥ ೬೫ ॥

ದುರ್ಯೋಧನ — ನನ್ನ ಪ್ರಾಣಗಳು ಹೊರಡುತ್ತಿವೆ. ಇವರೇ ಶಂತನು ಮೊದಲಾದ ನಮ್ಮ ಪಿತೃಪಿತಾಮಹರು. ಕರ್ಣನನ್ನು ಮುಂದು ಮಾಡಿಕೊಂಡು ನೂರು ಜನ ತಮ್ಮಂದಿರೂ ಇಗೋ ಇಲ್ಲಿ ನಿಂತಿರುವರು. ಐರಾವತದ ಮೇಲೇರಿ ಮಹೇಂದ್ರನ ಕೈಹಿಡಿದು ಕುಳಿತಿರುವ ಕಾಕಪಕ್ಷಧರನಾದ ಅಭಿಮನ್ಯುವು ನನ್ನನ್ನು ನೋಡಿ ಕೋಪಗೊಂಡು ಮಾತಾಡಿಸುತ್ತಿರುವನು. ಊರ್ವಶಿಯೇ ಮೊದಲಾದ

ಅಪ್ಸರೆಯರು ನನ್ನ ಸಮೀಪಕ್ಕೆ ಬರುತ್ತಿರುವರು. ಇವೇ ದೇಹ ಧಾರಿಗಳಾದ ಮಹಾರ್ಣವಗಳು. ಇವರೇ ಗಂಗಾದಿ ಮಹಾ ನದಿಗಳು. ನನ್ನನ್ನು ಕರೆದೊಯ್ಯುವುದಕ್ಕಾಗಿ ಯಮನು ಸಹಸ್ರ ಹಂಸಗಳಿಂದ ನಡಸಲ್ಪಡುವ ಈ ವೀರವಾಹಿಯಾದ ವಿಮಾನ ವನ್ನು ಕಳುಹಿಸಿರುವನು. ಇಗೋ, ಬಂದೆ, ಬಂದೆ!

(ಸ್ವರ್ಗಕ್ಕೆ ಹೋಗುತ್ತಾನೆ)

(ತೆರೆ)

ಧೃತರಾಷ್ಟ್ರ — ಸಜ್ಜನಕೆ ಧನವೆನಿಸಿ ತಪಕೆ ನೆಲೆವನೆಯೆನಿಸಿ
ಮೆರೆಯುವಾಶ್ರಮಕಿನ್ನು ನಡೆಯುವೆನು ಭರದಿ
ಮಕ್ಕಳಳಿಯಲು ಬಳಿಕ ರಾಜ್ಯದಲಿ ಫಲವೇನು?
ಸುಡಲಿ ರಾಜ್ಯವನಿನ್ನು ನಡೆವೆನಾಶ್ರಮಕೆ.

ಅಶ್ವತ್ಥಾಮ — ಕೈಗಳಲಿ ಬಿಲ್ಲುಬಾಣಗಳಾಂತು ಮಲಗಿದರ
ವಧಿಸಲೋಸುಗ ನಡೆವೆ ಶತ್ರುಗಳ ದಳಕೆ.

(ಭರತ ವಾಕ್ಯ)

ಬಲದೇವ — ಶತ್ರುಗಳ ಪಕ್ಷವನು ಸದೆದು ಶಾಂತಿಯ ನಿಲಿಸಿ
ನಮ್ಮ ದೊರೆ ಪಾಲಿಸಲಿ ಗೋಗಣವನು. ॥೬೬॥

(ಎಲ್ಲರೂ ಹೊರಡುವರು)

-ಊರುಭಂಗ ಮುಗಿಯಿತು.



# ಅಭಿಪ್ರಾಯಗಳು

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಪ್ರೊಫೆಸರಾಗಿದ್ದು ವಿಶ್ರಾಂತಿ ಹೊಂದಿರುವ ಶ್ರೀ ಎಂ. ಹಿರಿಯಣ್ಣ, ಎಂ ಎ , ಎಲ್ ಟಿ , ಅವರ ಅಭಿಪ್ರಾಯ .

"Bhāsa's minor plays are not always quite intelligible and I can easily imagine what an amount **of trouble their rendering** should have meant to you. I find the result extremely satisfactory and you have very well succeeded in preserving in your translation the charm and simplicity characteristic of Bhāsa."

* * * *

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಪ್ರೊಫೆಸರಾಗಿರುವ ಶ್ರೀ. ಆರ್. ವಿ. ಜಾಗಿರದಾರ, ಎಂ.ಎ. (ಲಂಡನ್), ಎಂ.ಆರ್. ಎ.ಎಸ್., ಅವರು ಹೀಗೆ ಹೇಳಿದ್ದಾರೆ :

" 'ಭಾಷಾಂತರ ಮಾಡುವಾಗ ಇರುವುದನ್ನು ಬಿಡದೆ, ಇಲ್ಲದ್ದನ್ನು ಸೇರಿಸದೆ ಮೂಲಗ್ರಂಥ ಹೇಗಿದೆಯೊ ಹಾಗೆಯೆ ಪ್ರತಿಬಿಂಬಿಸಬೇಕೆಂಬುದು ನನ್ನ ಗುರಿ' ಎಂದು ಶ್ರೀಯುತ ಎಲ್. ಗುಂಡಪ್ಪನವರು ಮುನ್ನುಡಿಯಲ್ಲಿ ಹೇಳಿದುದು ಸಮಂಜಸವಾದ ವಿಚಾರ. ಆ 'ಗುರಿಯು' ಬಹುಮಟ್ಟಿಗೆ ಇಲ್ಲಿ ಸಾಧಿಸಿದೆ ಎಂದು ಹೇಳಬಹುದು. 'ದೂತವಾಕ್ಯ'ದಲ್ಲಿ 'ದೂತಘಟೋತ್ಕಚ'ದಲ್ಲಿ ಮತ್ತು ಕೆಲಮಟ್ಟಿಗೆ 'ಊರುಭಂಗ' 'ಕರ್ಣಭಾರ'ಗಳಲ್ಲಿ ಭಾಸಕವಿಯ ಶೈಲಿಯಲ್ಲಿರುವ ಪ್ರೌಢಿಯೂ ಪ್ರಸಾದವೂ ಇಲ್ಲಿ ಮೂಡಿವೆ ಎಂದು ಹೇಳಬಹುದು. ಒಟ್ಟಾರೆ, ಭಾಸ ಮಹಾಕವಿಯನ್ನು ಕನ್ನಡಿಗರ ಮುಂದಿರಿಸುವ ಕೈಚಳಕವು ಎಲ್. ಗುಂಡಪ್ಪನವರಲ್ಲಿ ಇದೆ. . . . ."

## ಸತ್ಯಶೋಧನೆ ಅಥವಾ ಗಾಂಧೀಜಿಯವರ ಆತ್ಮಕಥೆ

(೫ ಭಾಗಗಳು — ೨ ಸಂಪುಟಗಳಲ್ಲಿ)

**ಬೆಲೆ ಆರು ರೂಪಾಯಿ**



## ಅನಾಸಕ್ತಿಯೋಗ - ಗಾಂಧೀಜಿ

**ಬೆಲೆ ಒಂದು ರೂಪಾಯಿ ನಾಲ್ಕಾಣೆ**



## ಗೀತಾಬೋಧ - ಗಾಂಧೀಜಿ

**ಬೆಲೆ ಎಂಟಾಣೆ**



## ಸಮಾಜದಲ್ಲಿ ಸ್ತ್ರೀಯರ ಸ್ಥಾನ

( ಪೂಜ್ಯಗಾಂಧೀಜಿಯವರ ವಚನಗಳು )

**ಬೆಲೆ ಎರಡಾಣೆ**

---

ನಮ್ಮಲ್ಲಿ ಎಲ್ಲಾ ಕವಿಗಳ, ಕತೆಗಾರರ, ಕಾದಂಬರಿಕಾರರ, ನಾಟಕ ಕರ್ತರ ಪುಸ್ತಕಗಳೂ, ಪೌರಾಣಿಕ, ಧಾರ್ಮಿಕ ಗ್ರಂಥಗಳೂ, ಜೀವನಚರಿತ್ರೆಗಳೂ ಮತ್ತು ಎಲ್ಲಾ ಸ್ಕೂಲ್ ಪುಸ್ತಕಗಳೂ ದೊರೆಯುತ್ತವೆ.

---

**ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ನಗರ**

ಭಾಸನ

# ಪಂಚರಾತ್ರ

ಎಲ್. ಗುಂಡಪ್ಪ, ಎಂ.ಎ

ಸತ್ಯಶೋಧನ ಪ್ರಕಟನ ಮಂದಿರ
ಕೋಟೆ, ಬೆಂಗಳೂರು
೧೯೪೬

# ಮುನ್ನುಡಿ

ಮಹಾಭಾರತದಲ್ಲಿ ಚಿತ್ರಿಸಿರುವ ಕೌರವ ಪಾಂಡವರ ಕಲಹದ ಕಥೆಯನ್ನು ನೆನೆಯುವಾಗ "ಈ ಯುದ್ಧ ನಡೆಯದಿರಬಾರದಾಗಿತ್ತೆ? ಅಣ್ಣ ತಮ್ಮಂದಿರು ಒಂದಾಗಿ, ಎರಡು ಪಕ್ಷದ ಮಹಾಪುರುಷರೂ ಕೂಡಿ ಬಾಳಿದ್ದರೆ ಎಷ್ಟು ಸೊಗಸಾಗಿರುತ್ತಿತ್ತೋ!" ಎಂದು ಒಮ್ಮೊಮ್ಮೆ ಎನ್ನಿಸುವುದು ಸಹಜ. ದ್ವೇಷಾಸೂಯೆಗಳೂ ಯುದ್ಧವಿನಾಶಗಳೂ ಕಣ್ಣೆದುರಿಗೇ ಕೆರಳುತ್ತಿದ್ದರೂ ವಿಶ್ವಕುಟುಂಬಿಗಳಾದ ಸಾತ್ವಿಕ ಪುರುಷರು ಶಾಂತಿ ಸೌಹಾರ್ದಗಳನ್ನೆ ಮುಂದು ಮಾಡಿಕೊಂಡು ಸರ್ವರಿಗೂ ಹಿತವಾಗಲೆಂದು ಶ್ರಮಿಸುತ್ತಿರುವುದು ಈಗಲೂ ಕಂಡುಬರುತ್ತಿದೆ ಆ ಬಗೆಯ ಸಾತ್ವಿಕ ಸ್ವಭಾವದವನಾದ ಭಾಸಕವಿ ಕೌರವ ಪಾಂಡವರಿಗೆ ಯುದ್ಧ ನಡೆಯದಿರಬಹುದಾದ ಒಂದು ಸನ್ನಿವೇಶದ ಕನಸು ಕಂಡಿದ್ದಾನೆ ಆ ಕನಸನ್ನೆ ಈ ಪಂಚರಾತ್ರ ರೂಪಕದಲ್ಲಿ ಚಿತ್ರಿಸಿದ್ದಾನೆ

ಪಾಂಡವರು ವನವಾಸವನ್ನು ಮುಗಿಸಿ ಅಜ್ಞಾತವಾಸದಲ್ಲಿರುವ ಕಾಲ ದುರ್ಯೋಧನನು ತನ್ನ ಗುಣಗಳಿಂದ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿ ಆ ಮೂಲಕ, ದ್ಯೂತದಲ್ಲಿ ಗೆದ್ದ ರಾಜ್ಯವನ್ನು ದಕ್ಕಿಸಿಕೊಳ್ಳಲು ಪ್ರಯತ್ನ ಮಾಡುತ್ತಿರುತ್ತಾನೆ ಒಂದು ಸಲ ಯಜ್ಞಮಾಡಿ ಸಮಸ್ತರನ್ನೂ ತಣಿಸುತ್ತಾನೆ ಆಗ, ಹಿರಿಯರೆಲ್ಲರೂ ಸಂತೋಷಪಟ್ಟರು; ಪ್ರಜೆಯೆಲ್ಲ ಅವನನ್ನು ನಂಬಿದರು; ಅವನೂ ಗುಣವಂತನಾದನು; ಹಿಂದಿನ ಕೆಟ್ಟ ಹೆಸರು ಮಾಯವಾಯಿತು. ಆ ಸುಖ ಸಮಯದಲ್ಲಿ ಆಚಾರ್ಯ ದ್ರೋಣನಿಗೆ ಗುರುದಕ್ಷಿಣೆ ಕೊಡಬೇಕೆಂದು ಸಂಕಲ್ಪಿಸಿ ಏನು ಬೇಕೆಂದು ಅವರನ್ನು ಕೇಳುತ್ತಾನೆ. ದ್ರೋಣನಿಗೆ ಪಾಂಡವರ ಮೇಲಿನ ಮರುಕ; ಅವರಿಗೆ ರಾಜ್ಯದ ಪಾಲುಕೊಟ್ಟು ದುರ್ಯೋಧನನು ಅಣ್ಣತಮ್ಮಂದಿರೆಲ್ಲರೊಡನೆ ಆನಂದದಿಂದ ಕೂಡಿ ಬಾಳುವುದನ್ನು ಕಾಣಬೇಕೆಂಬ ಬಯಕೆ. ಅದನ್ನು ದುರ್ಯೋಧನನು ನಡಸಿಕೊಡಲಾರನೆಂದು ಮನಸ್ಸಿನಲ್ಲಿ ಅಳುಕು. ಅದರಿಂದ ಕೇಳಲು ಹಿಂಜರಿಯುತ್ತಾರೆ. ದುರ್ಯೋಧನನು

ಬಗೆಬಗೆಯಲ್ಲಿ ಒತ್ತಾಯಮಾಡಿ, ಏನು ಕೇಳಿದರೂ ಕೊಡುವೆನೆಂದು ಮೊದಲೇ ಧಾರೆಯೆರೆದುಬಿಡುತ್ತಾನೆ.

ಆದರಿಂದ ನಂಬಿಕೆಹೊಂದಿ ದ್ರೋಣಾಚಾರ್ಯರು "ಪಾಂಡವರೊಡನೆ ಪಾಲುಮಾಡಿಕೊ ಅದೇ ನನಗೆ ದಕ್ಷಿಣೆ, ಅದೇ ನನ್ನ ಭಿಕ್ಷೆ" ಎಂದು ಕೇಳುತ್ತಾರೆ. ದುರ್ಯೋಧನನಿಗೇನೊ ಕೊಡಬೇಕೆಂಬ ಮನಸ್ಸು ಆದರೆ ಶಕುನಿಯ ವಿರೋಧವನ್ನು ಎದುರಿಸಲಾರ ಕರ್ಣ ಕೂಡ 'ಒಡಹುಟ್ಟಿದವರ ಒಲುಮೆಗೆ ಅಡ್ಡಬರಲಾರೆನೆ'ನ್ನುತ್ತಾನೆ ದುರ್ಯೋಧನನು ಮಾವನನ್ನು ಒಪ್ಪಿಸಲು ತುಂಬ ಕಷ್ಟಸಡುತ್ತಾನೆ ಕಡೆಗೆ ಶಕುನಿ ದುರ್ಯೋಧನನನ್ನು ಸುಳ್ಳುಮಾತಿನ ತಪ್ಪಿನಿಂದ ಬಿಡಿಸಲು ಒಂದು ಉಪಾಯ ಹೂಡುತ್ತಾನೆ 'ಐದು ರಾತ್ರಿಗಳೊಳಗೆ ಪಾಂಡವರ ಸುದ್ದಿಯನ್ನು ತರುವುದಾದರೆ' ಅರ್ಧ ರಾಜ್ಯವನ್ನು ಕೊಡುವುದಾಗಿ ದುರ್ಯೋಧನನ ಪರವಾಗಿ ತಾನೇ ತಿಳಿಸಿಬಿಡುತ್ತಾನೆ ದುರ್ಯೋಧನನೂ ಮಾವನ ಮಾತಿಗೆ ಪ್ರತಿ ಹೇಳುವುದಿಲ್ಲ

ದ್ರೋಣನಿಗೆ ನಿರಾಸೆಯಾಯಿತು 'ಹೀಗೆ ಕೊಡುವೆನೆನ್ನುವುದಕ್ಕಿಂತ ಕೊಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳುವುದೇ ಮೇಲು' ಎಂದು ವ್ಯಥೆಪಡುತ್ತಾನೆ ಅಷ್ಟರಲ್ಲಿ, ವಿರಾಟನಗರದಿಂದ ದೂತರು ಬಂದು ಕೀಚಕರಿಗೆ 'ಶಸ್ತ್ರದೇಟಿಲ್ಲದ ಸೋಜಿಗದ ಸಾವು' ಉಂಟಾದ ಸಂಗತಿಯನ್ನು ತಿಳಿಸುತ್ತಾರೆ ಭೀಷ್ಮರು ಅದು ಭೀಮಸೇನನ ಲೀಲೆಯಿರಬೇಕೆಂದು ಊಹಿಸಿ 'ಸಂಚರಾತ್ರ' ನಿಯಮವನ್ನು ಒಪ್ಪಿಕೊಳ್ಳುವಂತೆ ದ್ರೋಣಾಚಾರ್ಯರಿಗೆ ಸಲಹೆಕೊಡುತ್ತಾರ ಅವರು ಒಪ್ಪಿಕೊಂಡ ಬಳಿಕ, ತಮಗೆ ವಿರಾಟನ ಮೇಲೆ ಗುಪ್ತ ವೈರವಿರುವುದರಿಂದಲೂ, ಅವನು ದುರ್ಯೋಧನನ ಯಜ್ಞದರ್ಶನಕ್ಕೆ ಬರದಿದ್ದುದರಿಂದಲೂ ಅವನ ಗೋವುಗಳನ್ನು ಹಿಡಿಯಬೇಕೆಂದು ಸೂಚಿಸುತ್ತಾರ ಆಗ ಪುರಪ್ರವೇಶಕ್ಕೆ ಸಿದ್ಧವಾಗಿದ್ದ ಸೈನ್ಯವೆಲ್ಲ ಗೋಗ್ರಹಣಕ್ಕೆ ಹೊರಡುತ್ತದೆ. (ಅಂಕ ೧)

ವಿರಾಟರಾಜನು ತನ್ನ ವರ್ಷವರ್ಧಂತಿಯ ಕರ್ಮಗಳಲ್ಲಿ ತೊಡಗಿರುವಾಗ, ಕುರುಸೇನೆ ಅವನ ಗೋವುಗಳನ್ನು ಸೆರೆ ಹಿಡಿಯುತ್ತದೆ. ಆ ಸುದ್ದಿಯನ್ನರಿತು, ದೊರೆ ಯುದ್ಧಕ್ಕೆ ಹೊರಡಬೇಕೆನ್ನುವಷ್ಟರಲ್ಲೇ

ಉತ್ತರಕುಮಾರನು ಬೃಹನ್ನಳೆಯನ್ನು ಸಾರಥಿ ಮಾಡಿಕೊಂಡು ಕುರು ಸೈನ್ಯವನ್ನೆದುರಿಸಲು ನಡೆದುಬಿಟ್ಟಿರುತ್ತಾನೆ ಅಲ್ಲಿ ಅಜ್ಞಾತ ವಾಸದಲ್ಲಿದ್ದ ಪಾಂಡವರ ಹಿರಿಯ ಧರ್ಮರಾಜನಿಗೆ ತಮ್ಮಂದಿರೆಲ್ಲಿ ದುಡುಕುವರೋ ಎಂದು ಕಳವಳ; ಉಪಕಾರಿಗೆ ತಮ್ಮ ಜ್ಞಾತಿಗಳಿಂದಲೇ ಅವಮಾನ ವಾಯಿತಲ್ಲಾ ಎಂದು ಸಂಕಟ. ಅರ್ಜುನನು ಅನುಚಿತವಾಗಿ ನಡೆಯ ನೆಂದು ಸಮಾಧಾನ ಮಾಡಿಕೊಳ್ಳುತ್ತಾನೆ

ಉತ್ತರ ಕುಮಾರನು ರಣದಲ್ಲಿ ಭೀಷ್ಮ, ದ್ರೋಣ, ಕರ್ಣ ಮೊದ ಲಾದ ಮಹಾ ವೀರರನ್ನೆಲ್ಲ ಸೋಲಿಸಿ ತುರುಗಳನ್ನು ಮರಳಿಸಿದನೆಂದು ಸುದ್ದಿ ಬರುತ್ತದೆ ಜೊತೆಜೊತೆಯಲ್ಲೆ ಕೌರವ ಸೇನೆಯೊಡನೆ ಕಾಳಗಕ್ಕೆ ಬಂದಿದ್ದ ಅಭಿಮನ್ಯು ಕುಮಾರನು ಸೆರೆಸಿಕ್ಕಿದನೆಂದೂ ಸಂತೋಷ ವಾರ್ತೆ ಬರುತ್ತದೆ ಕೇಳಿ ವಿರಾಟೇಶ್ವರನ ಹಿಗ್ಗು ಹೇಳತೀರದು ಧರ್ಮರಾಜನ ದುಗುಡ ಮೇರೆ ಮೀರುತ್ತದೆ ಆದರೆ, ಅರಮನೆಯ ಬಾಣಸಿಗನು (ಭೀಮ) ಎತ್ತಿಕೊಂಡು ಬಂದನೆಂದು ಕೇಳಿ ನೆಮ್ಮದಿಯಾಗುತ್ತದೆ

ಅರ್ಜುನ ಭೀಮರು ಅಭಿಮನ್ಯುವನ್ನು ಆಸ್ಥಾನಕ್ಕೆ ಕರೆತರುತ್ತಾರೆ. ಅಜ್ಞಾತವೇಷದಲ್ಲಿ ಅವರನ್ನು ಗುರುತಿಸಲಾರದ, ಅಭಿಮನ್ಯು ಅವರ ಸಲಿಗೆ ನುಡಿಗಳಿಗೆ ಕೆರಳಿ ಮೂದಲಿಸುತ್ತಾನೆ. ಅವರೂ ಮಗನ ಸ್ವಾಭಿಮಾನ ಪರಾಕ್ರಮಗಳಿಗೆ ಹಿಗ್ಗಿ ತೃಪ್ತಿಪಡುತ್ತಾರೆ ವಿರಾಟೇಶ್ವರನು ಅಭಿಮನ್ಯು ವನ್ನು ಆದರಿಸುತ್ತಾನೆ ಆದರೆ ಆ ಕುಮಾರ ಆದರವನ್ನೊಲ್ಲ, ನಿಗ್ರಹವೇ ಬೇಕೆನ್ನುತ್ತಾನೆ. ತೋಳ್ಬಲಕ್ಕೆ ಸೆರೆಸಿಕ್ಕಿದ ತನ್ನನ್ನು ಭೀಮ ತೋಳ್ಬಲ ದಿಂದಲೇ ಬಿಡಿಸಿಕೊಳ್ಳಲೆನ್ನುತ್ತಾನೆ ಅಪೂರ್ವವಾದ ಈ ಸನ್ನಿವೇಶ ಬಹು ಮುದ್ದಾಗಿದೆ.

ಉತ್ತರ ಕುಮಾರನು ತಂದೆಗೆ ನಿಜಸ್ಥಿತಿಯನ್ನು ವಿವರಿಸಿ ಪಾಂಡವರ ಪರಿಚಯ ಮಾಡಿಕೊಡುತ್ತಾನೆ ದೊರೆ ಧನ್ಯನಾದೆನೆಂದು ಭಾವಿಸುತ್ತಾನೆ. ಅಭಿಮನ್ಯು ತಂದೆಯನ್ನು ಕಂಡು, ಗೋಗ್ರಹಣ ಸಫಲವಾಯಿತೆನ್ನುತ್ತಾನೆ ಅಜ್ಞಾತವಾಸದ ಅವಧಿ ಮುಗಿದದ್ದರಿಂದ ಪಾಂಡವರು ತಮ್ಮ ವೇಷವನ್ನು ತೊರೆಯುತ್ತಾರೆ. ಉತ್ತರ ಗೋಗ್ರಹಣದ ಜಯಕ್ಕಾಗಿ ವಿರಾಟೇಶ್ವರನು ಕೊಟ್ಟಉತ್ತರೆಯನ್ನು ಅರ್ಜುನನುಮಗನಿಗಾಗಿ ಸ್ವೀಕರಿಸುತ್ತಾನೆ (ಅಂಕ೩)

ಇತ್ತ ಕೌರವರ ಶಿಬಿರದಲ್ಲಿ ಅಭಿಮನ್ಯು ಸೆರೆಯಾದನೆಂದು ಅಪರಿಮಿತ ಕೋಲಾಹಲವೆದ್ದಿತು 'ಹಿರಿಯರಿಗೆ ಕಲಹವಾದರೆ ಮಕ್ಕಳಿಗೇನು ? ನಾನೇ ಬಿಡಿಸಿಕೊಂಡು ಬರಬೇಕು' ಎಂದು ದುರ್ಯೋಧನನ ಸಂಕಲ್ಪ. 'ಅವನು ನಿನಗಾಗಿ ಕಾಳಗದ ಮುಮ್ಮೊನೆಯಲ್ಲಿ ಕಾದಿದ. ಅವನನ್ನು ಬಿಡಿಸಿಕೊಳ್ಳದಿದ್ದರೆ, ನಾವು ನಾರುಡೆ ಉಡಬೇಕು' ಎಂದು ಕರ್ಣನ ನಿಶ್ಚಯ. ಶಕುನಿಗೆ ಮಾತ್ರ ಈ ಸಡಗರ ರುಚಿಸದು 'ನೀವು ತೆಪ್ಪಗಿರಿ. ಅವನಿಗೆ ಬಹುಜನ ರಕ್ಷಕರಿರುವರು. ಅವನಿಗೇನೂ ಕೇಡಾಗದು ಹೇಗೋ ಬಿಡುಗಡೆ ಹೊಂದುತ್ತಾನೆ' ಎಂದು ಅವನ ವಾದ

ಈ ಚರ್ಚೆಯ ನಡುವೆ, ಭೀಷ್ಮರ ಧ್ವಜಕ್ಕೆ ನಾಟಿಕೊಂಡ ಒಂದು ಬಾಣದಲ್ಲಿ ಅರ್ಜುನನ ಹೆಸರಿರುವುದು ಕಂಡುಬರುತ್ತದೆ. ಭೀಷ್ಮ ದ್ರೋಣಾದಿಗಳು ಪಾಂಡವರ ನೆಲೆ ಗೊತ್ತಾಯಿತೆಂದು ತೃಪ್ತಿಪಡುತ್ತಾರೆ. ಶಕುನಿ ಎಂದಿನಂತೆ ಪ್ರತಿಭಟಿಸುತ್ತಾನೆ 'ಅರ್ಜುನನೆಂದು ಬೇರೆ ಯಾರೂ ಇರಲೇ ಬಾರದೋ? ಇವರಿಗೆ ಭೂಮಂಡಲವೆಲ್ಲ ಪಾಂಡವ ಮಯವಾಗಿಯೇ ಕಾಣುತ್ತಿದೆ' ಎಂದು ಸಂದೇಹ ನುಡಿಯುತ್ತಾನೆ.

ಅಷ್ಟರಲ್ಲಿ ಉತ್ತರಕುಮಾರನು ಕೌರವಶಿಬಿರಕ್ಕೆ ಬಂದು ರಾಜ ಮಂಡಲಕ್ಕೆ ನಮಸ್ಕರಿಸುತ್ತಾನೆ ಉತ್ತರ ಸೊಸೆಯಾಗಿ ದೊರೆತಳೆಂದೂ ವಿವಾಹ ಮಂಗಳವನ್ನು ಎಲ್ಲಿ ನಡಸಬೇಕೆಂಬುದನ್ನು ತಿಳಿಸಬೇಕಂದೂ ಧರ್ಮರಾಜ ಕೇಳಿಕೊಂಡನೆಂದು ಬಿನ್ನವಿಸುತ್ತಾನೆ ಪಾಂಡವರು ಹೌದೇ ಅಲ್ಲವೇ ಎಂಬ ಚರ್ಚೆ ಕೊನೆಯಾಗುತ್ತದ.

ಪಂಚರಾತ್ರದೊಳಗೆ ಪಾಂಡವರ ನೆಲೆ ತಿಳಿಯಿತು ದುರ್ಯೋಧನನು 'ಸತ್ಯ ನಿಂತರೆ ನರರು ಸತ್ತರೂ ನಿಲ್ಲುತ್ತಾರೆ' ಎಂದು ನಂಬಿ, ಆಡಿದಂತೆ 'ಪಾಂಡವರಿಗೆ ನಾಡನ್ನು ಕೊಟ್ಟೆ' ಎನ್ನುತ್ತಾನೆ. ಎಲ್ಲರೂ ತಣಿಯುತ್ತಾರೆ (ಅಂಕ ೩)

ಅಣ್ಣತಮ್ಮಂದಿರು ಒಂದುಗೂಡುವ ಅವಕಾಶವಾಯಿತು. ಅವರು ಕೂಡಿ ಬಾಳಿ ಹೊಂದಿ ನಡೆದು ಆನಂದಿಸಿದ ಕನಸನ್ನೂ ಭಾಸ ಕಂಡಿದ್ದನೋ ಏನೋ! ಇಂಥ ಕನಸುಗಳಿಂದ ಮಾನವನ ಮನಸ್ಸು ತಿದ್ದಿ, ಬಾಳು ಮೇಲಾಗುವುದೆಂಬುದರಲ್ಲಿ ಸಂಶಯವಿಲ್ಲ.

ಈ ನಾಟಕದ ಭಾಷಾಂತರವನ್ನು ಈ ಹಿಂದೆ ಆಸ್ಥಾನ ವಿದ್ವಾನ್ ಶ್ರೀ. ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿಗಳು ತಮ್ಮ 'ರಂಗಭೂಮಿ' ಯಲ್ಲಿ ಪ್ರಕಟಿಸಿದ್ದರು. ಅವರಿಗೆ ನನ್ನ ವಂದನೆಗಳು.

೫—೫—೧೯೪೬

**ಎಲ್. ಗುಂಡಪ್ಪ**

# ಪಾತ್ರಗಳು

ಸೂತ್ರಧಾರ

| | |
|---|---|
| ಮೊದಲನೆಯವನು<br>ಎರಡನೆಯವನು<br>ಮೂರನೆಯವನು | ಮೂವರು ಬ್ರಾಹ್ಮಣರು |

ದ್ರೋಣ

ಭೀಷ್ಮ

ದುರ್ಯೋಧನ

ಕರ್ಣ

ಶಕುನಿ

ಭಟ—ದುರ್ಯೋಧನನ ಸೇವಕ

ದೂತ—ವಿರಾಟನಗರದಿಂದ ಬಂದ ದೂತ

ಮುದಿಗೊಲ್ಲ—ವಿರಾಟೇಶ್ವರನ ಗೋಪಾಲಕರ ಹಿರಿಯ

| | |
|---|---|
| ಗೋಮಿತ್ರಕ, ಗೋರಕ್ಷಿಣಿಕೆ, ಘೃತಪಿಂಡ, ಸ್ವಾಮಿನಿ,<br>ವೃಷಭದತ್ತ, ಕುಂಭದತ್ತ, ಮಹಿಷದತ್ತ | ಗೊಲ್ಲ ಹುಡುಗರು |

ಭಟ (ಜಯಸೇನ)—ವಿರಾಟೇಶ್ವರನ ಸೇವಕ

ಕಾಂಚುಕೀಯ—ವಿರಾಟೇಶ್ವರನ ಕಂಚುಕಿ

ದೊರೆ—ವಿರಾಟರಾಜ

ಭಗವಾನ್—ಬ್ರಾಹ್ಮಣ ವೇಷದಲ್ಲಿರುವ ಯುಧಿಷ್ಠಿರ

ಸೂತ— ವಿರಾಟರಾಜನ ಸಾರಥಿ

ಬೃಹನ್ನಳೆ—ನಪುಂಸಕ ವೇಷದ ಅರ್ಜುನ

ಭೀಮಸೇನ

ಅಭಿಮನ್ಯು

ಉತ್ತರ

ಸೂತ—ಅಭಿಮನ್ಯುವಿನ ರಥ ನಡಸುತ್ತಿದ್ದ ಸಾರಥಿ

ಸೂತ—ಭೀಷ್ಮರ ಸಾರಥಿ

# ಪಂಚರಾತ್ರ

## ಮೊದಲನೆಯ ಅಂಕ

(ನಾಂದಿಯಾದ ಮೇಲೆ ಬಳಿಕ ಸೂತ್ರಧಾರನು ಪ್ರವೇಶಿಸುತ್ತಾನೆ)

**ಸೂತ್ರಧಾರ** —

**ದ್ರೋಣನಿಳೆಯೆರೆವಲ್ಲಿ ಭೀಮಾರ್ಜುನರ** ದೂತನ್,
**ಶಕುನೀಶ್ವರನ ಕರ್ಣಧಾರನ್, ದುರ್ಯೋಧನನ್,**
**ಭೀಷ್ಮನ್, ಯುಧಿಷ್ಠಿರನ್, ಉತ್ತರ**ಗನ**ಭಿಮನ್ಯು,**
ಆ **ವಿರಾಟ್**ಪುರುಷ ತಾನೊಲ್ದು ಪಾಲಿಸಲಿ ನಮ್ಮನ್ ॥೧॥

(ತಿರುಗಿ ನೋಡಿ) ಆರ್ಯಮಹಾಶಯರಲ್ಲಿ ಹೀಗೆ ವಿಜ್ಞಾಪಿಸುತ್ತೇನೆ. ಓಹೋ, ನಾನು ವಿಜ್ಞಾಪಿಸುವುದಕ್ಕೆ ತೊಡಗಿರುವಾಗಲೇ ಏನೋ ಸದ್ದಾಗುವಂತೆ ಕೇಳುವುದು! ಇರಲಿ, ನೋಡೋಣ

(ನೇಪಥ್ಯದಲ್ಲಿ)

ಆಹಾ! ಕುರುರಾಜನ ಯಜ್ಞದ ವೈಭವವೆಷ್ಟು!

---

* ಈ ಮಂಗಳ ಶ್ಲೋಕದಲ್ಲಿ ಕವಿ ಶ್ರೀ ಕೃಷ್ಣನನ್ನು ಸ್ತುತಿಸಿದ್ದಾನೆ. ದ್ರೋಣನ್–ದ್ರೋಣಪಕ್ಷಿ (ಒಂದು ಬಗೆಯ ಕಾಗೆ) ಯಂತೆ ಕಪ್ಪು ಬಣ್ಣದವನು. ಶ್ರೀಕೃಷ್ಣ "ನೀಲ ಮೇಘಶ್ಯಾಮ." ದುರ್ಯೋಧನನಿಂದ ರಾಜ್ಯವನ್ನು ಕೇಳುವುದಕ್ಕಾಗಿ (ಭೀಮಾರ್ಜುನರಿಗೆ, ಪಾಂಡವರಿಗೆ) ದೂತನಾಗಿ ಹೋಗಿದ್ದವನು. ಶಕುನೀಶ್ವರ-ಪಕ್ಷಿರಾಜ, ಗರುಡ. ಕರ್ಣಧಾರ-ಹಡಗು ನಡಸುವವನು, ನಿಯಾಮಕ. ಗರುಡನನ್ನು ನಡಸುವವನು, ಶ್ರೀ ಕೃಷ್ಣ ಗರುಡವಾಹನ. ದುರ್ಯೋಧನನ್-ಕದನದಲ್ಲಿ ಎದುರಿಸಲು ಕಷ್ಟವಾದವನು, ಶತ್ರುಗಳಿಗೆ ದುಸ್ಸಾಧ್ಯನಾದವನು. ಭೀಷ್ಮನ್-(ದುಷ್ಟರಿಗೆ) ಭಯಂಕರನಾದವನು. ಯುಧಿಷ್ಠಿರನ್-ಯುದ್ಧದಲ್ಲಿ ಸ್ಥಿರನಾದವನು. ಉತ್ತರಗನ್-ಶ್ರೇಷ್ಠ ಮಾರ್ಗದಲ್ಲಿ ನಡೆಯುವವನು, ಮೇಲಾದ ಕರ್ಮ ಮಾಡುವವನು. ಅಭಿಮನ್ಯು-ಯಜ್ಞದಲ್ಲಿ ನಲಸಿ ಪೂಜೆಗೊಳ್ಳುವವನು. ವಿರಾಟ್‌ಪುರುಷ-ಸರ್ವೇಶ್ವರನಾದ ಆದಿಪುರುಷ. ಇಂಥ ಶ್ರೀ ಕೃಷ್ಣನು ನಮ್ಮನ್ನು ಕಾಪಾಡಲಿ ಎಂದು ತಾತ್ಪರ್ಯ. ಈ ಶ್ಲೋಕದಲ್ಲಿ ದ್ರೋಣ, ಭೀಷ್ಮ, ದುರ್ಯೋಧನ, ಕರ್ಣ, ಶಕುನಿ, ಯುಧಿಷ್ಠಿರ, ಭೀಮ, ಅರ್ಜುನ, ಅಭಿಮನ್ಯು, ವಿರಾಟ, ಉತ್ತರ – ಎಂಬ ಈ ನಾಟಕದ ಮುಖ್ಯ ಪಾತ್ರಗಳ ಹೆಸರುಗಳು ಸೂಚಿತವಾಗಿವೆ. ಮೂಲ ಸಂಸ್ಕೃತದ "ಉತ್ತರಗೋಽಭಿಮನ್ಯುಃ" ಎಂಬಲ್ಲಿ ಗೋಗ್ರಹಣವೂ ಸೂಚಿತವಾಗಿದೆ.

ಮೊದಲನೆಯವನು — ಸರಿಯಾಗಿ ಹೇಳಿದಿರಿ.

ಸೂತ್ರಧಾರ — ಆಗಲಿ, ತಿಳಿಯಿತು

ಅಂತವುರದವರೆಲ್ಲರೊಡಗೂಡಿ ಪ್ರೀತಿಯಿಂ
ದೈತರಲು ದೊರೆಗಳೆಲ್ಲ
ಕುರುರಾಜ ದುರ್ಯೋಧನನು ಮಾಡುವೀ ಯಜ್ಞ
ವೈಭವದಿ ನಡೆಯುತಿಹುದು. ॥ ೨ ॥

( ಹೋಗುತ್ತಾನೆ )

## ಸ್ಥಾಪನೆ ಮುಗಿಯಿತು

---

(ಬಳಿಕ ಮೂವರು ಬ್ರಾಹ್ಮಣರು ಪ್ರವೇಶಿಸುತ್ತಾರ)

ಎಲ್ಲರೂ — ಆಹಾ, ಕುರುರಾಜನ ಯಜ್ಞದ ವೈಭವವೆಷ್ಟು!

ಮೊದಲನೆಯವನು — ಇಲ್ಲಿಯಾದರೋ,

ದ್ವಿಜರುಂಡು ಚೆಲ್ಲಿದನ್ನಗಳಿಂದ ದಿಕ್ಕೆಲ್ಲ
ಕಾಶ ಪೂತಂತಿಹುದು. ಹವಿಯ ಹೊಗೆಯಿಂದಿಲ್ಲಿ
ಗುಂಪುಮರಗಳಲೆಲ್ಲ ಹೂಗಂಪು ಹೋಗಿಹುದು.
ಜಿಂಕೆಗೆಣೆಯಹವು ಹುಲಿ ಕೊಲೆಯುಳಿದ ಸಿಂಹಗಳ
ಬೀಡುಗಳು ಮಲೆಗಳಿವು ದೊರೆ ದೀಕ್ಷೆಗೊಂಡಿರಲು
ಜಗವೆಲ್ಲ ತಾನೊಡನೆ ದೀಕ್ಷೆಗೊಂಡಂತೆ ಇಹುದು. ॥ ೩ ॥

ಎರಡನೆಯವನು — ತಾವು ಚೆನ್ನಾಗಿ ಹೇಳಿದಿರಿ.

ತಣಿದನಮರೋತ್ತಮರ ಮುಖವೆನಿಸಿದಗ್ನಿ ತಾ
ಹವಿಯಿಂದ ತೃಪ್ತಿಪಡೆದರು ವಿಪ್ರವರರಿತ್ತ
ಧನದಿಂದ. ಹಕ್ಕಿಗಳ ತಂಡಗಳು, ಗೋವುಗಳ
ಹಿಂಡುಗಳು, ಮೇಣಲ್ಲಿ ಬಂದ ಬಂದೆಲ್ಲ ಜನ
ರೆಲ್ಲ ಬಗೆಯಲು ತಣಿದರಾನಂದಗೊಂಡುದಿಂ

ದೀ ಲೋಕ ಸರ್ವ ಪ್ರಕಾರದಲು. ರಾಜನಲಿ
ಸದ್ಗುಣಗಳನು ಕಂಡು ಕೊರಲೆತ್ತಿ ಹೊಗಳುವುದು.
ಇಂತೆಮ್ಮ ಲೋಕ ಮೇಲ್ಗುಣಗಳಿಂದವರ್ಗೆ
ನೆಲೆಯೆನಿಪ ಲೋಕಗಳನೆಲ್ಲವನು ಮೀರಿಸಿಹುದು ‖ ೪ ‖

ಮೂರನೆಯವನು — ಪೂಜ್ಯರಾದ ಈ ಬ್ರಾಹ್ಮಣರು,

ಪಟ್ಟವೆರಸಿದ ಮುಡಿಯ ಪದಕೆ ನೋಕಿಸಿ ಮೊರೆಗ
ಳೆರಗಿದರು ಹೆಸರಾಂತ ಮಿಗಿಲರಿಪ ನಡೆದವರು
ಮುಪ್ಪಿನಲು ನಿಯಮಗಳ ಹೆಚ್ಚಿಸುತಲಿಡೆವರಿಯ
ದಧ್ಯಯನಮಾಡುವರು ಮುಪ್ಪಡಸಿ ಮೈ ಸಡಿಲ
ವಾಗಿರಲು, ಕೈಯ ಶಿಷ್ಯರ ಹೆಗಲಲಿಟ್ಟು, ಕೋ
ಲೂರಿ ಮುಕ್ಕಾಲಿಂದ ನಡೆಯುವೀ ಬ್ರಾಹ್ಮಣರು
ಮುಪ್ಪಾಂತ ಸಲಗಗಳ ತೆರೆದೆ ತಾವೈದುತಿಹರು ‖ ೫ ‖

ಎಲ್ಲರೂ — ಹೋ, ಹೋ! ವಟುಗಳೇ! ಹೋ, ಹೋ! ವಟುಗಳೇ! ಅವಭೃಥ ಸ್ನಾನವಾಗುವುದಕ್ಕೆ ಮೊದಲೇ ಜಿಂಕಿ ಹಾಕಿ ಹೊತ್ತಿಸ ಬೇಡಿ.

ಮೊದಲನೆಯವನು — ಅಯ್ಯೋ, ಹಾಳಾಯಿತು! (ಕಡೆಗೂ) ಹುಡುಗತನ ವನ್ನು ತೋರಿಸಿಯೇ ಬಿಟ್ಟರು!

ನೋಡಿರಿದೊ, ಯೂಪವುರಿಯುತ್ತಿರಲು ಹೊಂದೋಳ
ತಳೆದೊಲಿಹುದೀ ವಸುಧೆ. ಶೂದ್ರನನು ಪಾರ್ವನೊಲು
ಲೌಕಿಕಾಗ್ನಿಯ ಬಳಿಯೆ ತಾಳದೀ ಚೈತ್ಯಾಗ್ನಿ.
ಹಸಿಯ ದರ್ಭೆಗಳಿಂದ ಸುತ್ತುಗಟ್ಟಿದ ವೇದಿ
ಹೆಚ್ಚಾಗಿ ಸುಡದಿಹುದು. ಅರಳುದಾವರೆಗೊಳವ
ನಾನೆವೊಲು ಪ್ರಾಗ್ವಂಶವನು ಹೊಗುತಲಿಹುದು
ಹೊಗೆಯು. ‖ ೬ ‖

ಎರಡನೆಯವನು — ಸರಿಯೆ,

ಬೆಂಕಿಯ ದಿಗಿಲಿಂದಂಜುತ ಪಾರ್ವರು
ಬೆಂಕಿಯ ಬೇರೆಡೆಗೊಯ್ಯುವರು ;
ಕುಲದಲಿ ಕಟ್ಟಳಿಯಲು ದಾಯಾದ್ಯರ
ಭಯದಿಂ ದಾಯೂದಿಯನೆನಲು. ॥ ೭ ॥

ಮೂರನೆಯವನು — ಇದಿನ್ನೊಂದನ್ನು ನೋಡಿ.

ತುಪ್ಪವ ತುಂಬಿದ ಬಂಡಿಯಿದೀಗ
ತೊಯ್ದಿರ್ಕರೆದೊಡವೆಡೆ ಬಿಡದಂತೆ,
ಮಗು ಮಡಿದಿರುವಾ ಮಡದಿಯ ಹಾಗೆ
ಬಾಲಸ್ನೇಹದಿ ಬೇಯುತ್ತಿಹುದು ॥ ೮ ॥

ಮೊದಲನೆಯವನು — ಸರಿಯಾಗಿ ಹೇಳಿದಿರಿ.

ಚಕ್ರವರ್ತಿಯ ಧರ್ಮಶಕಟಿಯನು ಸುಡಲಿದ್ದ
ಬೆಂಕಿ, ದರ್ಭೆಯಲಿ ಹಸಿಹುಲ್ಲಿಂದ ಮೆಲುಮೆಲನೆ
ಕುಗ್ಗಿ ಕಂದುತ್ತಿರಲು, ಗಾಳಿಯಿಂದುರೆ ಕೆರಳಿ,
ಉರಿಗಳಿಂ ಪರಿದೆದ್ದು, ಕ್ರಮದೆ ಚಕ್ರವ ಸೇರಿ,
ಸುತ್ತುಮರವನು ಸುತ್ತಿ ಸೂರ್ಯನನೆ ಹೋಲುತಿಹುದು ॥೯॥

ಎರಡನೆಯವನು — ಇದಿನ್ನೊಂದನ್ನು ನೋಡಿ ಸ್ವಾಮಿ.

ಹುತ್ತದಾ ಬುಡದಿಂದ ಕಿಚ್ಚಿಗಂಜುತಲೈದು
ಸರ್ಪಗಳು ಜೊತೆಯಾಗಿ ಬಿಲಗಳಿಂದ,
ಸತ್ತ ಮನುಜನ ದೇಹದಿಂದಲೈದಿಂದ್ರಿಯಗ
ಳೊಮ್ಮೆಯೇ ನೆಗೆವಂತೆ ಹೊರಹರಿದುವು. ॥ ೧೦ ॥

ಮೂರನೆಯವನು — ಇದು ಮತ್ತೊಂದನ್ನು ನೋಡಿ :

ಗಾಳಿಗೂಡಿದ ಬೇಳ್ವೆಬೆಂಕಿಯಿಂದುರಿಯುತಿಹ
ಮರದ ಪೊಟ್ಟರೆವೈಯೊಳಿರುವ ಹಕ್ಕಿಗಳೆದ್ದು
ಹಾರಿದುವು ಪ್ರಾಣಗಳ ಹಾಗೆ. ॥ ೧೧ ॥

**ಮೊದಲನೆಯವನು** — ಸರಿಯೆ,

ಒಣಗಿದೀ ಮರವೊಂದರಿಂದ
ಹೊತ ಮರವಿಡಿದ ಬನವೆಲ್ಲ
ನಡೆವಳಿಯನುಳಿದೊಬ್ಬನಿಂದ
ಕುಲವೆಂತೊ ಅಂತು ಬೇಯುವುದು ॥ ೧೨ ॥

**ಎರಡನೆಯವನು** — ಗಾಳಿ ಹೊಡೆಯುತ್ತಿರಲು ಬೇಳ್ವಿಬೆಂಕಿಗೆ ಸಿಕ್ಕಿ
ಬೇಯುವೀ ಬಿದಿರುಗಳು ನರರ ಭಾಗ್ಯಗಳಂತೆ
ಏಳುವುವು, ಬೀಳುವುವು ಮಣಿದು. ॥ ೧೩ ॥

**ಮೂರನೆಯವನು** — ತಾವು ಚೆನ್ನಾಗಿ ಹೇಳಿದಿರಿ.

ಒಣಬಳ್ಳಿ ತಾನಡರಿ ಕೊಂಬೆಯನು ತಬ್ಬಿ
ಹೆಣೆದುಕೊಂಡಿರಲು ಮರ ಬೆಂದುರಿಯುತಿಹುದು ;
ಕೆಟ್ಟ ಕುಲದಲಿ ತಂದು ತೊಡರಿಸಿದ ಸಾಧು
ಕೊರಳುಗಟ್ಟಿದ ಹೆಣ್ಣ ದೋಷದಿಂದೆನಲು ॥ ೧೪ ॥

**ಮೊದಲನೆಯವನು** — ಇದಿನ್ನೊಂದನ್ನು ನೋಡಿ ಸ್ವಾಮಿ.

ಮರ ಗಿಡ ಪೊದೆಯಿಂದಿಡಿದೀ ಅಡವಿಯು
  ಸಾಹಾರವನೋ ಎನೆ ತಣಿದುಂಡು
ದರ್ಭೆಯ ಬಳಿವಿಡಿದೈದುತ ಹವಿಯುಣಿ
  ಕೈತೊಳೆವುದಕೆನೆ ನದಿಗಿಳಿದಿಹನು. ॥ ೧೫ ॥

**ಎರಡನೆಯವನು** — ಇಗೋ, ಇಗೋ!

ಮರದಿಂದ ಮರಕೆ ನಡೆಯಿತು ಬೆಂಕಿ ಹರಡಿರುವ
ದರ್ಭೆಚೀರಗಳಿಂದ  ಬಾಳೆಯಲಿ ಬೆಂದು ಬೆಂ
ದುದಿರುತಿರುವುದು ಕಾಯಿ ಮಾಗಿ ಹಣ್ಣಾದಂತೆ.
ದೊಡ್ಡ ಜೇನ್ಗೂಡಗಳನು ತಲೆಯಲ್ಲಿ ತಳೆದೆಸೆವ
ತಾಳೆಮರ ಬುಡದಲ್ಲಿ ನಿಡಿದುರಿದು ಬೀಳುತಿದೆ
ರುದ್ರನಾ ಪರಶು ತಾನ್ ಬೀಳುತಿರುವಂತೆ. ॥ ೧೬ ॥

ಮೂರನೆಯವನು — ಆಹಾ! ಸತ್ಪುರುಷರ ರೋಷದ ಹಾಗೆ ಭಗವಾನ್ ಹುತಾಶನನು ಶಾಂತನಾದನು.

ಈ ಬೆಂಕಿಬಲವಳಿಯಿತುರುವಲಳಿವಿಂದಾರ್ಯ
ನೀವ ಶಕ್ತಿಯ ಹಾಗೆ ಸಿರಿಯುಳಿವಿನಿಂದ. ॥ ೧೭ ॥

ಮೊದಲನೆಯವನು —

ಸ್ರುಚದ ಪಾತ್ರೆಯನರಣಿದರ್ಭೆಗಳನು
ಈ ಹುತಾಶನ ತಾನು ತಿನ್ನುತಿಹನು;
ದುರ್ವ್ಯಸನದಿಂದ ಕೀಳ್ಗತಿಗಿಳಿದ ನರನು
ತನ್ನುಡುಪುತೊಡಪನೇ ಬಳಸಿ ಬಾಳುವೊಲು. ॥ ೧೮ ॥

ಎರಡನೆಯವನು —

ಹೊಳೆಯ ಮುತ್ತುಗವೊಂದು ಕೊಂಬೆ ಕೆಳಬಾಗಿರಲು
ಗಾಳಿಗಲುಗುತ್ತಿರುವ ಎಲೆಗೈಯ ತಳೆದು
ಕಾಡುಕಿಚ್ಚಿನ ವಿಪತ್ತಿನಲಿ ಬಾಳ್ಗಿಟ್ಟಳಿದ
ಮರಗಳಿಗೆ ತಣಿಸೀರನೆರವವೋಲಿಹದು. ॥ ೧೯ ॥

ಮೂರನೆಯವನು — ಬನ್ನಿ, ನಾವೂ ಆಚಮನ ಮಾಡೋಣ

ಇಬ್ಬರೂ — ಆಗಬಹುದು

(ಎಲ್ಲರೂ ಆಚಮನ ಮಾಡಿ)

ಮೊದಲನೆಯವನು — ಓಹೋ! ಪೂಜ್ಯನಾದ ಕುರುರಾಜ ದುರ್ಯೋಧನನು ಭೀಷ್ಮ ದ್ರೋಣರನ್ನು ಮುಂದುಮಾಡಿಕೊಂಡು ರಾಜಮಂಡಲಿ ಹಿಂಬಾಲಿಸುತ್ತಿರಲು ಇತ್ತಕಡೆಗೇ ಬರುತ್ತಿದ್ದಾನೆ. ಈ ಪೌರರಾದರೋ,

"ಯಜ್ಞದಿಂ ತಣಿಸು ನೀಂ; ನೆಲನ ಗೆಲ್ಲಾರ್ಪಿನಿಂ;
ಸಿಟ್ಟ ತೊರೆ; ತನ್ನರೊಳ್ ದಯುಶಾಲಿಯಾಗು."
ಎಂದಿಂತು ಕಾಲೋಚಿತವನಿನಿದು ನುಡಿಯುತ್ತ
ಪಾಂಡವರ ಪುದುವಾಳ್ಗೆ ಮನವೊಲಿಸುತಿಹರು. ॥ ೨೦ ॥

ಆದ್ದರಿಂದ ಬನ್ನಿ, ನಾವೂ ಹೋಗಿ ಕುರುರಾಜನನ್ನು ಮನ್ನಿಸೋಣ.

**ಇಬ್ಬರೂ** — ಆಗಬಹುದು

**ಎಲ್ಲರೂ** — ಜಯವಾಗಲಿ, ಮಹಾರಾಜನಿಗೆ ಜಯವಾಗಲಿ.

(ಎಲ್ಲರೂ ಹೋಗುತ್ತಾರೆ)

**ವಿಷ್ಕಂಭಕ ಮುಗಿಯಿತು.**

---

(ಬಳಿಕ ಭೀಷ್ಮದ್ರೋಣರು ಪ್ರವೇಶಿಸುತ್ತಾರೆ)

**ದ್ರೋಣ** — ಧರ್ಮವನ್ನವಲಂಬಿಸಿದ ದುರ್ಯೋಧನನಿಂದ ನಾನೇ ಕೃತಾರ್ಥನಾದೆನಲ್ಲವೆ! ಏಕೆಂದರೆ,

ಬಂಧುಗಳ ಮೀರಿ, ಸಂಗಾತಿಗಳನುಳಿದು ತಾ
ನಾಚಾರ್ಯನೆಡೆಗೆ ಬರುವುದು ಶಿಷ್ಯದೋಷ.
ಎಳವೆಯೊಳೆ ಮಗುವ ಗುರುವೆಡೆಗೆ ತಂದೊಪ್ಪಿಸುವ
ತಂದೆಯಲು ತಾಯಿಯಲು ತಪ್ಪಿನಿತುಮಿರದು. ॥ ೨೧ ॥

**ಭೀಷ್ಮ** — ಇದೋ, ಈ ದುರ್ಯೋಧನನು,

ಹಣವ ಗಳಿಗಳಿಸುತ್ತಲೇಳಿಗೆಯ ಪಡೆದು ತಾನ್
ಕದನದೊಲವಿಂದಪಖ್ಯಾತಿಯನು ತಳೆದನ್.
ಸುಕೃತಕ್ಕೆ ನಲೆಯೆನಿಪ ಧರ್ಮವನು ಕೈಕೊಂಡು
ಅವನೆ ಬಹುಕಾಲಕೀ ರೂಪದಿಂದೆಸೆವನ್. ॥ ೨೨ ॥

(ಬಳಿಕ ದುರ್ಯೋಧನನೂ ಕರ್ಣ ಶಕುನಿಗಳೂ ಪ್ರವೇಶಿಸುತ್ತಾರೆ)

**ದುರ್ಯೋಧನ** —

ಶ್ರದ್ಧೆ ಮೂಡಿತು ಮನದೆ; ನಲವನಾಂತರು ನಮ್ಮ
ಗುರುಜನರು; ನಂಬಿತೆನ್ನನು ಲೋಕ; ನೆಲಸಿದವು
ನಲ್ಗುಣಗಳ್; ಅಳಿಯಿತಾ ಕೆಟ್ಟ ಹೆಸರು.

ಸತ್ತವರು ಪಡೆವರಾ ಸ್ವರ್ಗವೆಂದೊರೆವರೇ
ಆ ಮಾತು ಸಟೆ; ಪರೋಕ್ಷದಲಿಲ್ಲವಾ ಸ್ವರ್ಗ;
ಬಹುಗುಣದಿನಿಲ್ಲಿಯೇ ಫಲಿಸುವುದದು. ॥ ೨೩ ॥

ಕರ್ಣ— ಗಾಂಧಾರೀಪುತ್ರ, ನ್ಯಾಯವಾಗಿ ಬಂದ ಹಣವನ್ನು ನೀನು ನಿಶ್ಶೇಷವಾಗಿ ವೆಚ್ಚಮಾಡಿದ್ದು ನ್ಯಾಯವೇ ಆಯಿತು. ಏಕೆಂದರೆ,

ಕ್ಷತ್ರಿಯರೇಳಿಗೆ ಬಾಣದಧೀನ
ಮಗಗೆಂದಿಡುವನು ವಂಚಿತನಹನು
ಪಾರ್ವರ ಮಡಿಲಿಗೆ ಸಿರಿಯೆಲ್ಲವ ಸುರಿ
ದೀವುದು ದೊರೆ ಬಿಲ್ಲೊಂದನೆ ಮಗಗೆ ॥ ೨೪ ॥

ಶಕುನಿ— ಗಂಗಾ (ಜಲ) ಸ್ಪರ್ಶದಿಂದ ಮೈಕೊಳೆ ತೊಳೆದುಕೊಂಡ ಅಂಗರಾಜನು ಚೆನ್ನಾಗಿ ಹೇಳಿದನು

ಕರ್ಣ—

ಇಕ್ಷ್ವಾಕು, ಶರ್ಯಾತಿ, ಯಯಾತಿ, ಶ್ರೀರಾಮ,
ಮಾಂಧಾತೃ, ನಾಭಾಗ, ನೃಗನಂಬರೀಷನ್—
ಈ ಪುರುಷರೊಡಲಳಿದು ದೇಶಕೋಶಗಳೊಡನೆ
ನಾಶವಾದರು ; ತಮ್ಮ ಕ್ರತುಗಳಿಂ ಜೀವಿಸಿಹರು. ॥ ೨೫ ॥

ಎಲ್ಲರೂ— ಗಾಂಧಾರೀಪುತ್ರ, ಯಜ್ಞವನ್ನು ಮುಗಿಸಿ ದೈವಾನುಗ್ರಹದಿಂದ ಏಳಿಗೆ ಹೊಂದಿದೆ.

ದುರ್ಯೋಧನ— ಅನುಗೃಹೀತನಾದೆ. ಆಚಾರ್ಯರೇ, ನಮಸ್ಕಾರ ಮಾಡುತ್ತೇನೆ.

ದ್ರೋಣ— ಬಾ, ಬಾ, ಮಗನೇ ; ಇದು ಅಕ್ರಮ

ದುರ್ಯೋಧನ— ಹಾಗಾದರೆ ಯಾವುದು ಕ್ರಮ ?

ದ್ರೋಣ— ಏನು, ನೀನು ಕಾಣೆಯಾ ?

ಮನುಜನಾಗಿ ಬಂದ ದೇವನಿವಗೆ ಮೊದಲು ಮಣಿವುದು.
ಉಚಿತ ನಡತೆಯೆನ್ನೆ, ಭೀಷ್ಮನಿರಲು ಮೀರಿ ಮಣಿವುದು. ॥ ೨೬ ॥

ಭೀಷ್ಮ — ಬಾರದು, ಬಾರದು, ತಾವು ಹಾಗೆನ್ನಬಾರದು. ಅನೇಕ ಕಾರಣಗಳಿಂದ ನಾನು ನಿಮಗಿಂತಲೂ ಕೀಳಾದವನು. ಏಕೆಂದರೆ,

ನಾನ್ ಬಂದೆ ತಾಯ್ಬಸಿರೊಳ್; ನೀನ್ ಸ್ವಯಂಜಾತನೈ.
ಎನ್ನದಾಯುಧವೃತ್ತಿ, ನಿನ್ನದುಪಶಾಂತಿ
ದ್ವಿಜ ನೀನು; ಕ್ಷತ್ರಕುಲದಲಿ ಹುಟ್ಟಿದವರಾವು.
ಗುರು ನೀನು; ಶಿಷ್ಯರೊಳ್ ಗಣ್ಯರಹೆವಾವು ॥ ೨೭ ॥

ದ್ರೋಣ — ಮಹಾತ್ಮರು ತಮ್ಮನ್ನು ತಾವು ಅಪಸ್ತೋತ್ರ ಮಾಡಿಕೊಳ್ಳಲು ಉತ್ಸಾಹಪಡದಿರುವರೆ? ಬಾ, ಮಗನೆ, ನನಗೆ ನಮಸ್ಕಾರಮಾಡು.

ದುರ್ಯೋಧನ — ಆಚಾರ್ಯ, ವಂದಿಸುತ್ತೇನೆ

ದ್ರೋಣ — ಬಾ, ಬಾ, ಮಗನೇ, ಹೀಗೆಯೇ ಅವಭೃಥಸ್ನಾನಗಳಲ್ಲಿ ಖೇದ ಹೊಂದುತ್ತಿರು.

ದುರ್ಯೋಧನ — ಅನುಗೃಹೀತನಾದೆ ಅಜ್ಜ, ನಮಸ್ಕರಿಸುತ್ತೇನೆ.

ಭೀಷ್ಮ — ಬಾ, ಬಾ, ಪೌತ್ರ ಹೀಗೆಯೇ ನಿನ್ನ ಬುದ್ಧಿ ಶಾಂತವಾಗಿರಲಿ.

ದುರ್ಯೋಧನ — ಅನುಗೃಹೀತನಾದೆ ಮಾವ, ನಮಸ್ಕರಿಸುತ್ತೇನೆ

ಶಕುನಿ — ಮಗು,

ಹೀಗೆಯೇ ಕ್ರತುಗಳೆಲ್ಲವನು
ಪೂರ್ಣದಕ್ಷಿಣೆಗೊಟ್ಟು ಮಾಡಿ,
ರಾಜಸೂಯದಿ ನೃಪರ ಗೆದ್ದು
ಹಿಡಿತಾ ಜರಾಸಂಧನಂತೆ ॥ ೨೮ ॥

ದ್ರೋಣ — ಓಹೋ, ಆಶೀರ್ವಾದದಲ್ಲಿಯೂ ಶಕುನಿ ಉದ್ವೇಗವನ್ನು ಉಂಟುಮಾಡುತ್ತಾನೆ ಓಹೋ, ವಿರೋಧದಲ್ಲಿಯೇ ಪ್ರೀತಿ ಈ ಕ್ಷತ್ರಿಯ ಕುಮಾರನಿಗೆ!

ದುರ್ಯೋಧನ — ಗೆಳೆಯ, ಕರ್ಣ, ಗುರುಜನರಿಗೆ ನಮಸ್ಕಾರಮಾಡಿದ ಬಳಿಕ ಕ್ರಮವಾಗಿ ಬಂದ ಗೆಳೆತನದೊಲವನ್ನು ಅಂಗೀಕರಿಸು

ಕರ್ಣ — ಗಾಂಧಾರೀ ಪುತ್ರ,

ಬೇಳ್ವಿನೋಂಪಿಗಳಿಂದ ಕಂದಿತೀ ನಿನ್ನ ಮೈ.
ತಾಳಲಾರ್ಪೊಡೆ ಬಲವ ಬಿಗಿದು ತಬ್ಬುವೆನು.
ಅಂತರ್ಯವರಿಯದೆಯೆ ತಬ್ಬಿ ಪೀಡಿಸೆ ನಾನು.
ರಾಜರ್ಷಿಧೀರವಚನಕ್ಕೆ ಭಯುವೆನಗೆ. ॥ ೨೯ ॥

ದುರ್ಯೋಧನ — ನಿನ್ನ ಬುದ್ಧಿ ಹೀಗೆಯೇ ಇರಲಿ

ದ್ರೋಣ — ಮಗನೆ, ದುರ್ಯೋಧನ, ಮಹೇಂದ್ರನ ಪ್ರಿಯಸಖನಾದ ಈ ಭೀಷ್ಮಕನು ನಿನ್ನನ್ನು ಮನ್ನಿಸುತ್ತಾನೆ

ದುರ್ಯೋಧನ — ಆರ್ಯನಿಗೆ ಸ್ವಾಗತ. ವಂದಿಸುತ್ತೇನೆ.

ಭೀಷ್ಮ — ಪೌತ್ರ, ದುರ್ಯೋಧನ, ದಕ್ಷಿಣಾಪಥಕ್ಕೆ ಅಗುಳಿಯಂತಿರುವ ಈ ಭೂರಿಶ್ರವನು ನಿನ್ನನ್ನು ಮನ್ನಿಸುತ್ತಾನೆ

ದುರ್ಯೋಧನ — ಆರ್ಯನಿಗೆ ಸ್ವಾಗತ.

ದ್ರೋಣ — ಪುತ್ರ, ದುರ್ಯೋಧನ, ನಿನ್ನ ಯಜ್ಞವನ್ನು ಗೌರವಿಸಿ ವಾಸುಭದ್ರ (ಶ್ರೀಕೃಷ್ಣ) ನು ಕಳಿಸಿರುವ ಅಭಿಮನ್ಯು ನಿನ್ನನ್ನು ಸೇವಿಸುತ್ತಾನೆ

ಶಕುನಿ — ವತ್ಸ, ದುರ್ಯೋಧನ, ಜರಾಸಂಧನ ಮಗ ಈ ಸಹದೇವನು ನಿನ್ನನ್ನು ವಂದಿಸುತ್ತಾನೆ.

ದುರ್ಯೋಧನ — ಬಾ, ಬಾ, ಮಗು, ತಂದೆಗೆ ಸಮಾನವಾದ ಪರಾಕ್ರಮವುಳ್ಳವನಾಗು.

ಎಲ್ಲರೂ — ಈ ರಾಜಮಂಡಲಿಯೆಲ್ಲ ನಿನ್ನನ್ನು ಮನ್ನಿಸುತ್ತದೆ.

ದುರ್ಯೋಧನ — ಅನುಗ್ರಹವಾಯಿತು ಏನಿದು! ರಾಜಸಮೂಹವೆಲ್ಲ ಬಂದಿರುವಲ್ಲಿ ವಿರಾಟನೇಕೆ ಬರಲಿಲ್ಲ?

ಶಕುನಿ — ಅವನ ಬಳಿಗೆ ದೂತನನ್ನು ಕಳುಹಿದ್ದೇನೆ. ದಾರಿಯಲ್ಲಿರಬಹುದೆಂದು ತೋರುತ್ತದೆ.

**ದುರ್ಯೋಧನ**— ಭೋ, ಆಚಾರ್ಯ! ಧರ್ಮದಲ್ಲಿ, ಧನುಸ್ಸಿನಲ್ಲಿ– ಎರಡರಲ್ಲಿಯೂ ಆಚಾರ್ಯ, ದಕ್ಷಿಣೆಯನ್ನು ಸ್ವೀಕರಿಸಬೇಕು.

**ದ್ರೋಣ**— ದಕ್ಷಿಣೆಯೆಂದೆಯಾ? ಇರಲಿ, ಇರಲಿ, ನಾನೇ ಕೇಳಿಕೊಳ್ಳುತ್ತೇನೆ ನಿನ್ನನ್ನು

**ದುರ್ಯೋಧನ**— ಏನು, ಆಚಾರ್ಯರೂ ಕೇಳಿಕೊಳ್ಳುವುದೇ?

**ಭೀಷ್ಮ**— ಅಯ್ಯಾ, ಏನು ತಾನೆ ಪ್ರಯೋಜನ? ಏಕೆಂದರೆ,

ಕುಡಿದನೆಳವೆಯೊಳಿತ್ತ ಸೋಮವನು ವಿಧಿಯಿಂದ;
ಕೊಡೆನೆರಳ ಸೇವಿಪನು; ಪ್ರಖ್ಯಾತಿಯಿಹುದು.
ಕ್ಷತ್ರಗುರು ಪಾರ್ವನಲದಾವ ವಸ್ತುಗೆ, ಫಲಕೆ,
ಮೇಣಾವ ಪೆಂಪಿಂಗೆ, ದಾರಿದ್ರ್ಯವಿಹುದು? ॥ ೩೦ ॥

**ದುರ್ಯೋಧನ**—ಅಪ್ಪಣೆ ಮಾಡಬೇಕು ತಾವು ತಾವೇನು ಬಯಸುತ್ತೀರಿ? ನಾನೇನು ಮಾಡಲಿ?

**ದ್ರೋಣ**— ಮಗನೇ, ದುರ್ಯೋಧನ, ಹೇಳುತ್ತೇನೆ.

**ದುರ್ಯೋಧನ**— ಹೀಗೇಕೆ ಯೋಚನೆ ಮಾಡುತ್ತಿದ್ದೀರಿ?

ಪ್ರಾಣಾಧಿಕಂ ನಿಮಗೆ; ನಿಮ್ಮಿಂದಲುಪದೇಶಪಡೆದವಂ;
ಶೂರರೊಳ್ ಗಣನೆಗಾಂ ಸಂದಿರುವೆನೆಸಗಿಹೆಂ ಸಾಹಸಗಳಂ
ಅಳುಕದೆಯೆ ನುಡಿಯಿರೇನ್ ಬಯಸುಪಿರದೇನ ತಂದೀವೆನಾನ್?
ಕೈಯಲಿದೊ ಈ ನನ್ನ ಗದಯಿಹುದು, ಸರ್ವವೂ ತಮ್ಮದಹುದು॥೩೧॥

**ದ್ರೋಣ**— ಮಗನೇ, ಹೇಳುತ್ತೇನಪ್ಪಾ. ಕಣ್ಣೀರು ಉಕ್ಕಿ ಬಂದು ತಡೆಯುತ್ತಿದೆ.

**ಎಲ್ಲರೂ**— ಆಚಾರ್ಯರೂ ಅದೇಕೆ ಕಣ್ಣೀರು ಹಾಕುವರೊ!

**ಭೀಷ್ಮ**— ಪೌತ್ರ, ದುರ್ಯೋಧನ, ವ್ಯರ್ಥ ನಿನ್ನ ಪ್ರಯತ್ನ.

**ದುರ್ಯೋಧನ**— ಯಾರಲ್ಲಿ?

(ಪ್ರವೇಶಿಸಿ)

ಭಟ— ಜಯವಾಗಲಿ, ಮಹಾರಾಜರಿಗೆ

ದುರ್ಯೋಧನ— ಸ್ವಲ್ಪ ನೀರು

ಭಟ— ಮಹಾರಾಜರ ಅಪ್ಪಣೆ (ಹೋಗಿ, ಬಂದು) ಮಹಾರಾಜರಿಗೆ ಜಯವಾಗಲಿ ಇಗೋ ನೀರು

ದುರ್ಯೋಧನ— ತಾ ಇಲ್ಲಿ (ಕಲಶವನ್ನು ತೆಗೆದುಕೊಂಡು) ಆಚಾರ್ಯರೇ, ಕಣ್ಣೀರು ಸುರಿದು ನೆನೆದ ಮುಖವನ್ನು ತೊಳೆದುಕೊಳ್ಳಬೇಕು

ದ್ರೋಣ— ಆಗಲಿ, ಆಗಲಿ ನನ್ನ ಕೆಲಸವನ್ನು ನಡಸಿಕೊಟ್ಟರೆ ಅದೇ ಮುಖೋದಕವಾಗುತ್ತದೆ

ದುರ್ಯೋಧನ— ಅಯ್ಯೋ!

ಹಿಂದಿನೆನ್ನ ಕುಟಿಲಗಳನು ನೆನೆವಿರಾದೊಡೆ,
ನೆನೆದು, 'ಕೊಡನು' ಎಂದು ಬಗೆವಿರಾದೊಡೆ,
ಶರಗಳೊತ್ತಿ ಕಠಿನವಾದ ಕೈಯ ನೀಡಿರಿ
ಕೋಳ್ಗೆ ಕರಣ ಧಾರೆ, ನೀರನೆರೆವೆ ಹಿಡಿಯಿರಿ ॥ ೩೨ ॥

ದ್ರೋಣ— ಆಹಾ! ಈಗ ನನ್ನ ಮನಸ್ಸಿಗೆ ನಂಬಿಕೆಯಾಯಿತು ಮಗನೇ, ಕೇಳು.

ಎಲ್ಲಿಯೋ ತೊಳಲುವರು ಮಿಗೆ ನಿರಾಶ್ರಯರಾಗಿ,
ವರ್ಷ ಹನ್ನೆರಡಾಯ್ತು, ನೆಲೆಗಂಡುದಿಲ್ಲ.
ಆ ಪಾಂಡವರ ಕೂಡೆ ಪಾಲುಮಾಡಿಕೊ ನೀನು
ಇದುವೆ ದಕ್ಷಿಣೆಯೆನಗೆ, ಮೇಣೆನ್ನ ಭಿಕ್ಷೆ. ॥ ೩೩ ॥

ಶಕುನಿ— (ಉದ್ವೇಗದಿಂದ) ಹಾಗಾಗಕೂಡದು ಸ್ವಾಮಿ.

ನಿಷ್ಠನಿಗೆ, ಮಾತು ಕೊಟ್ಟವಗೆ,
ಗೌರವದಿ ನೆಚ್ಚನಿಟ್ಟವಗೆ,
ಯಜ್ಞದೀ ನೆಪನ ಹೂಡಿ
ಮಾಡುವುದೆ ಧರ್ಮವಂಚನೆಯ? ॥ ೩೪ ॥

ದ್ರೋಣ — ಅದು ಹೇಗೆ ಧರ್ಮವಂಚನೆಯೆಂದೆ? ಹಾಗೆನ್ನಬೇಡ. ಗಾಂಧಾರ ರಾಜ್ಯದಿಂದ ಸೊಕ್ಕಿದವನೇ, ಶಕುನೀ, ನಿನ್ನ ಅನಾರ್ಯ ಭಾವದಿಂದ ಸರ್ವ ಲೋಕವನ್ನೂ ಅನಾರ್ಯವೆಂದೇ ಭಾವಿಸುತ್ತೀಯೆ. ಓಹೋ, ಹೋ! ಅಯ್ಯಾ,

ಒಡಹುಟ್ಟಿದವರ್ಗವರ ತಂದೆಯಿಂ ಬಂದಿರುವ
ರಾಜ್ಯವನು ಕೊಡು ಎಂಬುದಿದು ವಂಚನೆ!
ಯಾವುದುತ್ತಮ, ನನ್ನ ಬೇಡಿಕೆಗೆ ಕೊಡುವುದೋ?
ಅವರೆ ಬಲವಂತದಿಂ ಕಸಿದುಕೊಳ್ಳುವುದೋ? ॥ ೩೫ ॥

ಎಲ್ಲರೂ — ಹೇಗೆ, ಬಲವಂತದಿಂದಲೇ!

ಭೀಷ್ಮ — ಪೌತ್ರ, ದುರ್ಯೋಧನ, ಈಗಿನ ವಿಷಯ ಅವಭೃಥಸ್ನಾನ ಮಾತ್ರ ಮಿತ್ರಮುಖದ ಶತ್ರುವಾಗಿರುವ ಶಕುನಿಯ ಮಾತು ಕೇಳಬಾರದು ನೋಡು ಮಗು,

ದ್ರುಪದರಾಜನ ಸುತೆಯ ಜೊತೆಗೊಂಡು ಪಾಂಡವರು
ಕಾಡ ಬಿರುದೂಳ್ತಳೆದು ನೆಲನನಲೆಯುವುದು,
ನೀನವರಲವರು ನಿನ್ನಲಿ ವಿಮುಖರಾಗಿಹುದು —
ಎಲ್ಲವೂ ಶಕುನಿಯುರುಗರ್ವದಾ ಬಿಸುಪು ॥ ೩೬ ॥

ದುರ್ಯೋಧನ — ಇರಲಿ ಆಚಾರ್ಯರೇ, ತಮ್ಮನ್ನೊಂದು ವಿಚಾರ ಕೇಳುತ್ತೇನೆ.

ದ್ರೋಣ — ಮಗನೇ, ಹೇಳು

ದುರ್ಯೋಧನ —

ಹಿಂದೆ, ಸಭೆಯ ಮಧ್ಯದಲ್ಲಿ
ರಾಜ್ಯವನೂ ಮಾನವನೂ
ಸೆಳೆದು ಹೀನಪಡಿಸಿದಂದು,
ಅವರು, ಬಲಾತ್ಕಾರಗೈವ
ಧೀರರೇಕೆ ತಮ್ಮ ರೋಷ
ವದುಮಿ ಕೆಮ್ಮನಿದ್ದರು? ॥ ೩೭ ॥

**ದ್ರೋಣ** — ಈ ವಿಷಯದಲ್ಲಿ ಧರ್ಮದ ನೆಪದಿಂದ ಮೋಸಹೋದ ಜೂಜು ಕೋರನಾದ ಯುಧಿಷ್ಠಿರನನ್ನು ಕೇಳಬೇಕು

ಸಭೆಯ ಕಂಬವ ಭೀಮ ತೂಗುತಿರುವಷ್ಟರಲೆ
ತಡೆದನವನನು (ಧರ್ಮಸೂನುವಂದು)
ತಡೆಯದೆಯೆ ತಾನೊಮ್ಮೆ ಬಿಟ್ಟರಲು, ಶಕುನಿಯಿವ
ನಾಕ್ಷೇಪಿಸಿರುವನೇ, ನಮ್ಮನಿಂದು? ॥ ೩೮ ॥

**ಭೀಷ್ಮ** — ಮೊದಲು ಮಾಡಿದ್ದೊಂದು, ಆದದ್ದೊಂದು ಭೋ ಆಚಾರ್ಯ, ಈಗ ಕಾರ್ಯ ಮುಖ್ಯವಾದದ್ದು, ಕಲಹವಲ್ಲ

**ದ್ರೋಣ** — ಈ ವಿಷಯದಲ್ಲಿ ಮೆತ್ತಗಿರಬಾರದು ಕಲಹವೇ ಆಗಲಿ.

**ಭೀಷ್ಮ** — ಆಚಾರ್ಯನು ಪ್ರಸನ್ನನಾಗಬೇಕು. ನೋಡು ಪೌತ್ರ,

ದುರ್ಬಲರು, ದೀನರು, ನಿರಾಶ್ರಯರು, ನಿನ್ನೊಡನೆ
ಸಾಮವೆಳಸುವರವರು; ಗರ್ವಪಡರು.
ಹಿರಿಯ ನೀನ್; ನಿನ್ನೊಳೊಲವುಳ್ಳರವರ್; ಅವರ ಮನೆ
ಗೂಡುವೆಯೊ? ಮೃಗಗಳೊಡನಲೆಯುತಿರಲೊ? ॥೩೯॥

**ಶಕುನಿ** — ಇರಲಿ, (ಹಾಗೆಯೇ) ಇರಲಿ

**ಕರ್ಣ** — ಆಚಾರ್ಯರೇ, ಸಿಟ್ಟು ಮಾಡಬೇಡಿ. ದುರ್ಯೋಧನನಾದರೋ,

ಹಿತವಾದರೂ ಬಿರುಸುನುಡಿಗೇಳಿ ಕುದಿಯುವನು.
ಮೇಲಾಳ ಮಹಿಮೆಗಳ ಹೊಗಳುವುದ ಸೈರಿಸನು.
ಕೊನೆಗೊಂಡುದಿದು; ಶಿಷ್ಯಕಾರ್ಯವನು ರಕ್ಷಿಪುದು.
ಬಹುದೋಷದಾನೆಯೊಲು ನಯದಲೇ ನಡಸಲಹುದು ॥೪೦॥

**ದ್ರೋಣ** — ವತ್ಸ ಕರ್ಣ, ಕೆರಳುವಂಥದು ಬ್ರಾಹ್ಮಣ್ಯ. ಸಮಯದಲ್ಲಿ ಎಚ್ಚರಿಸಿದೆ. ಈಗ, ನಾನು ನಿನ್ನ ಅಭಿಪ್ರಾಯದಂತೆ ನಡೆದು ಕೊಳ್ಳುತ್ತೇನೆ. ಮಗು, ದುರ್ಯೋಧನ, ನಾನು ನಿನಗೆ ದೊಡ್ಡವ ನಲ್ಲವೆ?

ಭೀಷ್ಮ — ಇದೀಗ ದಾರಿಗೆ ಬಂದರು  ನಯ ಮೂರ್ಖರಿಗೆ ಔಷಧಿ

ದುರ್ಯೋಧನ — ನನಗೊಬ್ಬನಿಗೇ ಅಲ್ಲ, ನಮ್ಮ ಕುಲಕ್ಕೇ ತಾವು ಪ್ರಭುಗಳು.

ದ್ರೋಣ — ಇದು ನಿನಗೆ ಒಪ್ಪತಕ್ಕದ್ದು  ಆದ್ದರಿಂದ, ಮಗು,

ನಾ ನಿನ್ನ ರಕ್ಷಿಸಲು ತಪ್ಪಿಲ್ಲ ನಿನ್ನಲ್ಲಿ
ನಿನ್ನ ಪೀಡಿಸಿದೆನೋ, ಅದು ನಿನ್ನ ಲಾಭಕಾಗಿ
ಒಬ್ಬರೊಬ್ಬರಲಿರುವ ಮೇಲ್ಕುಲದರೊಡಕುಗಳು
ಧರ್ಮಾಧಿಕಾರಿಗಳ ಮಾತಿನಲಿ ಶಾಂತವಹವು ॥ ೪೧ ॥

ದುರ್ಯೋಧನ — ಆದ್ದರಿಂದಲೇ ಆಲೋಚಿಸಬಯಸುತ್ತೇನೆ

ದ್ರೋಣ — ಮಗನೇ, ಯಾರೊಡನೆ ಆಲೋಚಿಸಲೆಳಸುವೆ ?

ಭೀಷ್ಮನಲೊ? ಕರ್ಣನಲೊ? ಕೃಪನೊಡನೊ? ಯಾರೊಡನೆ?
ಸಿಂಧುನೃಪನೀ ಜಯದ್ರಥನೊಡನೊ, ಏನು ?
ದ್ರೌಣಿಯೊಡನೋ ? ಮೇಣು ವಿದುರನೊಡಗೂಡಿಯೋ ?
ತಂದೆಯೊಡನೋ ? ನಿಮ್ಮ ತಾಯೊಡನೊ ?
ಮಗನೆ ಹೇಳು ॥ ೪೨ ॥

ದುರ್ಯೋಧನ — ಅಲ್ಲ, ಅಲ್ಲ. ಮಾವನೊಡನೆ

ದ್ರೋಣ — ಏನು, ಶಕುನಿಯೊಡನೆಯೇ ? ಅಯ್ಯೋ, ಕೆಟ್ಟಿತು ಕೆಲಸ

ದುರ್ಯೋಧನ — ಮಾವ, ಸ್ವಲ್ಪ ಇಲ್ಲಿ ಬಾ. ಕರ್ಣ, ಸ್ವಲ್ಪ ಬಾ ಇಲ್ಲಿ.

ದ್ರೋಣ — (ತನ್ನಲ್ಲೇ) ಆಗಲಿ. ಹೀಗೆ ಮಾಡಿ ನೋಡೋಣ. (ಪ್ರಕಾಶವಾಗಿ) ಮಗು, ಗಾಂಧಾರರಾಜ, ಇಲ್ಲಿ ಬಾರಪ್ಪ.

ಶಕುನಿ — ಇಗೋ, ಬಂದೆ.

ದ್ರೋಣ — ಮಗೂ,

ಮುಂಗೋಪಿ ವಯಸೆನಗೆ ; ಮುಪ್ಪು ಕುಗ್ಗಿಸಿತು.
ಕ್ಷಮಿಸಯ್ಯ ವಟುಗೊಪ್ಪುವೆನ್ನ ಚಪಲತೆಯ.

ಇಂದು (ನಾನಾಡಿರುವ) ಬಿರುಸುನುಡಿಯಿದಕೆ
ವಾತ್ಸಲ್ಯದಪ್ಪುಗೆಯೆ ತಣಿವಿನುಪಚಾರ. ॥ ೪೩ ॥

ಭೀಷ್ಮ — (ತನ್ನಲ್ಲೇ)

ಶಿಷ್ಯರೊಲವಿಂದ ಗುರು ಶಕುನಿಯನು ಬೇಡುವನು.
ಇಂತು ಸಂತೈಸಿದರು ತನ್ನ ಕೊಂಕಳಿಯನಿವನು. ॥ ೪೪ ॥

ಶಕುನಿ — (ತನ್ನಲ್ಲೇ) ಒಳ್ಳೆಯ ಠಕ್ಕ ಆಚಾರ್ಯ ತನ್ನ ಕೆಲಸಕ್ಕಾಗಿ ನನ್ನನ್ನು ಸಮಾಧಾನಪಡಿಸುತ್ತಾನೆ

(ಎಲ್ಲರೂ ಹೋಗಿ ಕುಳಿತುಕೊಳ್ಳುತ್ತಾರೆ)

ದುರ್ಯೋಧನ — ಮಾವಾ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಡುವ ವಿಚಾರದಲ್ಲಿ (ನಿನ್ನ) ನಿಶ್ಚಯವೇನು?

ಶಕುನಿ — ಕೊಡಬಾರದೆಂದೇ ನನ್ನ ನಿಶ್ಚಯ

ದುರ್ಯೋಧನ — ಕೊಡಬೇಕೆಂದು ಹೇಳಿಬಿಡು, ಮಾವಾ.

ಶಕುನಿ — ರಾಜ್ಯವನ್ನು ಕೊಡಬೇಕೆಂದಿದ್ದ ಪಕ್ಷದಲ್ಲಿ ಅದೇಕೆ ನಮ್ಮೊಡನೆ ಆಲೋಚನೆ ಮಾಡುತ್ತೀಯೆ? ಎಲ್ಲವನ್ನೂ ಕೊಟ್ಟುಬಿಡು ಮತ್ತೆ.

ದುರ್ಯೋಧನ — ಗೆಳೆಯ, ಅಂಗರಾಜ, ಈಗ ನೀನೇನೂ ಹೇಳಲೇ ಇಲ್ಲ.

ಕರ್ಣ — ಈಗ ನಾನೇನು ಹೇಳಲಿ?

ರಾಮ ತಾನನುಭವಿಸಿ (ನಲಿದು) ಪಾರಿಪಾಲಿಸಿದ
ಒಡಹುಟ್ಟಿನೊಲುಮೆಯನು ತಡೆಮಾಡೆನಾನು.
ಮನ್ನಿಪುದೊ ಬಿಡುವುದೋ ನಿಶ್ಚಯಿಸುವನು ನೀನು.
ಕಾಳಗದ ಕಾಲದಲಿ ನೆರವಿಗರು ನಾವು. ॥ ೪೫ ॥

ದುರ್ಯೋಧನ — ಮಾವ, ಬಲಿಷ್ಠರಾದ ಶತ್ರುಗಳಿಂದ ಕೂಡಿ ಜೀವನಕ್ಕೆ ಆಧಾರವಿಲ್ಲದಿರುವ ಯಾವುದಾದರೊಂದು ಹಾಳು ದೇಶವನ್ನು ಯೋಚಿಸು. ಅಲ್ಲಿರಲಿ ಪಾಂಡವರು.

**ಶಕುನಿ** — ಅಯ್ಯೋ! ಸಾಧ್ಯವೇ!

ದೊರೆಯದೆಂದೊರೆಯುವೆನು (ನೀನರಸುವಾ ನಾಡು).
ಪಾರ್ಥಗಿಂತಲು ಮಿಗಿಲು ಬಲವಂತನಾರು?
ಮರುಭೂಮಿಯಾದರೂ ಬೆಳೆ ಬಂದು ತುಂಬುವುದು
ಆ ಯುಧಿಷ್ಠಿರನರಸನಾಗಿರಲು ಅಲ್ಲಿ ॥ ೪೬ ॥

**ದುರ್ಯೋಧನ** — ಹಾಗಾದರೆ ಈಗ,

ಗುರುಗಳಂಗೈಯಲ್ಲಿ ಧಾರೆನೀರೆರೆದಾಯ್ತು
ಹಿರಿಯರಿಂದರಿತೆನಿದು ಜಗದೊಳ್ ಪ್ರಮಾಣವೆಂದು.
ಇದನೀತಿಯೋ ರಕ್ಷೊ ಏನಾದರಾಗಿರಲಿ;
ನಿಜಮಾಡಲೆಳಸುವೆನು ದೊರೆಯೆ ನಾನೆರೆದ ನೀರ ॥ ೪೭ ॥

**ಶಕುನಿ** — ನಿನ್ನನ್ನು ಸುಳ್ಳುಮಾತಿನ ತಪ್ಪಿನಿಂದ ಬಿಡಿಸಬೇಕು ತಾನೆ?

**ದುರ್ಯೋಧನ** — ಹೌದು

**ಶಕುನಿ** — ಹಾಗಾದರೆ ಇಲ್ಲಿ ಬಾ (ಪಕ್ಕಿರಕ್ಕೆ ಹೋಗಿ) ಆಚಾರ್ಯರೇ, ಈ ಪೂಜ್ಯ ಕುರುರಾಜನು ತಮ್ಮಲ್ಲಿ ಬಿನ್ನಹ ಮಾಡುತ್ತಾನೆ

**ದ್ರೋಣ** — ಮಗು, ಗಾಂಧಾರರಾಜ, ಹೇಳು

**ಶಕುನಿ** — ಐದು ರಾತ್ರಿಗಳೊಳಗೆ ಪಾಂಡವರ ಸುದ್ದಿಯನ್ನು ತರುವುದಾದರೆ ರಾಜ್ಯದಲ್ಲಿ ಅರ್ಧವನ್ನು ಕೊಟ್ಟುಬಿಡುತ್ತಾನಂತೆ. ತರಿಸಿ ತಾವೀಗ (ಅವರ ಸುದ್ದಿಯನ್ನು)

**ದ್ರೋಣ** — ಇದೇನಿದು, ಹೀಗೆನ್ನುತ್ತೀರಿ!

ಹನ್ನೆರಡು ವರ್ಷಗಳು ಛಲಿಸಬೇಕೆಂದೆಳಸಿ
ನೀವಾರನರಸಿಯೂ ಕಂಡರಿಯಿರೋ,
ಅವರ ತರಬೇಕು ನಾನ್ನೈದು ರಾತ್ರಿಗಳಲ್ಲಿ!
ಕೊಡೆನೆಂಬುದೇ ಮೇಲು ತಿಳಿನುಡಿಗಳಲ್ಲಿ! ॥ ೪೮ ॥

**ಭೀಷ್ಮ** — ಮಗು, ದುರ್ಯೋಧನ, ನೆಪವಿಲ್ಲದ್ದು ಧರ್ಮ. ನಮಗೂ ಕೂಡ ಈ ವಿಷಯದಲ್ಲಿ ತುಂಬ ಸಂತೋಷ. ನೋಡು ಮಗು,

ವರ್ಷಕ್ಕೊ ಮೇಣ್ ನೂರು ವರ್ಷಕ್ಕೊ ತಪ್ಪದಾ
ಪಾಂಡುಸುತರಿಗೆ ನಾಡ ಹಂಚಿಕೊಡು ನೀನು.
ಆದರಿಂ ಪ್ರತಿಜ್ಞೆಯನು ಸತ್ಯಮಾಡೆಲೆ ವೀರ.
ಸತ್ಯಪ್ರತಿಜ್ಞರೈ ಕುರುಕುಲದರೆಂದುಂ. ॥ ೪೯ ॥

ದುರ್ಯೋಧನ – ಇದೇ ನನ್ನ ನಿಶ್ಚಯ.

ದ್ರೋಣ — ( ತನ್ನಲ್ಲೇ )

ಈಗಳೀ ಕಾರ್ಯಸಾಧಿಸುವಾಸೆಯಿಂದ
ಹನುಮಂತತನವನೆಳಸುವುದೆನ್ನ ಬಯಕೆ
ಕುಪ್ಪಳಿಸಿ ತಾನಂದು ಕಡಲ, ಕಳವಾದ
ಸೀತೆಯಾ ಸುದ್ದಿಯನು ತಂದೊರೆದನಲ್ತೆ. ॥ ೫೦ ॥

ಈಗೆಲ್ಲಿಂದ ತರುವುದು ಪಾಂಡವರ ಸುದ್ಧಿಯನ್ನು!

( ಪ್ರವೇಶಿಸಿ )

ಭಟ — ಜಯವಾಗಲಿ, ಮಹಾರಾಜರಿಗೆ. ವಿರಾಟಪಟ್ಟಣದಿಂದ **ದೂತ** ಬಂದಿದ್ದಾನೆ

ಎಲ್ಲರೂ — ಬೇಗ ಒಳಕ್ಕೆ ಬರಮಾಡು.

ಭಟ — ಅಪ್ಪಣೆ. (ಹೋಗುತ್ತಾನೆ)

( ಪ್ರವೇಶಿಸಿ )

ದೂತ — ಜಯವಾಗಲಿ, ಮಹಾರಾಜರಿಗೆ.

ಎಲ್ಲರೂ — ಬಂದನೇನು, ವಿರಾಟರಾಜ ?

ದೂತ — ದುಗುಡ ಮುಸುಕಿದ್ದರಿಂದ ಬರುವಹಾಗಿಲ್ಲ.

ಎಲ್ಲರೂ — ಏನವನಿಗೆ ದುಗುಡ ?

ದೂತ — ಮಹಾರಾಜರು ಲಾಲಿಸಬೇಕು. ನಮ್ಮ ರಾಜರ ಸಂಬಂಧಿಗಳಾಗಿ ಅವರಿಗೆ ತುಂಬ ಬೇಕಾದವರಾದ ನೂರ್ವರು ಕೀಚಕ ಸಹೋದರರನ್ನೂ,

ರಾತ್ರಿಯಲದಾವನೋ ಅಡಗಿಕೊಂಡಿದ್ದು
ತೋಳ್ಗಳಿಂದಲೆ ಹೊಡೆದು ಕೊಂದುರುಳಿಸಿದನು.
ಅವರೊಡಲುಗಳಲೆಲ್ಲ ಮಿಗೆ ತೋರಿತಂದು
ಶಸ್ತ್ರದೇಟೊಂದಿರದ ಸೋಜಿಗದ ಸಾವು. ॥ ೫೧ ॥

ಎಲ್ಲರೂ — ಏನು ? ಶಸ್ತ್ರದೇಟಿಲ್ಲದ ವಧೆಯೆ ?

ಭೀಷ್ಮ — ಏನು, ಶಸ್ತ್ರವಿಲ್ಲದೆಯೆ ? (ಇತರರಿಗೆ ಕೇಳದಂತೆ) ಅಯ್ಯಾ, ಆಚಾರ್ಯರೇ, ಒಪ್ಪಿಕೊಳ್ಳಿ ಪಂಚರಾತ್ರವನ್ನು.

ದ್ರೋಣ — (ಮಿಕ್ಕವರಿಗೆ ಕೇಳದಂತೆ) ಅದೇಕೆ ?

ಭೀಷ್ಮ — ತೋಳ್ಬಲದೊಳಗ್ಗಳಿಯ ಭೀಮಸೇನನ ಲೀಲೆ
ಯಪ್ಪುದಿದು, ಸುಸ್ಪಷ್ಟವಾಯ್ತು.
ಈ ನೂರು ಸೋದರರೊಳಿಹ ತನ್ನ ರೋಷವನು
ತೀರಿಸಿದನಾನೂರ್ವರಲ್ಲಿ. ॥ ೫೨ ॥

ದ್ರೋಣ — ಅದು ಹೇಗೆ ತಿಳಿದಿರಿ ?

ಭೀಷ್ಮ — ಆಹ, ಪಂಡಿತ ! (ಹೊಳೆಯ) ದಡಗಳಲಿ ಸುತ್ತಿದೆಳ
ಗರುಗಳುರೆ ಚಿಣ್ಣಾಟಗಳನು,
ಮೇಣವರ ಕೊಂಬು ನಟ್ಟಿಡೆಗಳನು, ಕಂಡೊಡನೆ
ಗೂಳಿಗಳು ಗುರುತಿಸವದೆಂತೈ ? ॥ ೫೩ ॥

ದ್ರೋಣ — ಗೂಳಿಗಳೆಂದಿರಾ ? ಓಹೋ, ಕೈಗೂಡಿತು ಕೆಲಸ ! (ಪ್ರಕಾಶವಾಗಿ) ಮಗನೇ ದುರ್ಯೋಧನ, ಇರಲಿ ಪಂಚರಾತ್ರ.

ದುರ್ಯೋಧನ — ಅಡ್ಡಿಯೇನು ? ಆಗಬಹುದು, ಪಂಚರಾತ್ರ.

ದ್ರೋಣ — ಎಲೆ ಎಲೈ, ಯಜ್ಞದರ್ಶನಕ್ಕೆ ಬಂದಿರುವ ರಾಜರೇ, ಕೇಳಿ, ಕೇಳಿ. ಈಗ ಈ ಪೂಜ್ಯನಾದ ಕುರುರಾಜ ದುರ್ಯೋಧನನು — ಅಲ್ಲ, ಅಲ್ಲ, ಅಲ್ಲ — ಮಾವನೊಡಗೂಡಿದ ಈತನು, ಪಾಂಡವರ ಸುದ್ದಿಯನ್ನು ತಂದ ಪಕ್ಷದಲ್ಲಿ ರಾಜ್ಯದಲ್ಲಿ ಅರ್ಧವನ್ನು ಕೊಡುತ್ತಾನಂತೆ. ಅಲ್ಲವೇ, ಮಗು ?

ದುರ್ಯೋಧನ— ಹೌದು.

ದ್ರೋಣ— ಇದನ್ನು ಎರಡು ಮೂರು ಸಲ ಯೋಚಿಸಿ ನಿಶ್ಚಯ ಮಾಡು.

ಶಕುನಿ— ಇರಲಿ, ಇರಲಿ. ಕಾಲ ಬಂದಾಗ ನೋಡೋಣ!

ದ್ರೋಣ— ಅಲ್ಲವೆ, ಗಾಂಗೇಯ ?

ಭೀಷ್ಮ— (ತನ್ನಲ್ಲೇ)

ಆಚಾರ್ಯನೀ ಹರ್ಷಭರವು ಧೈರ್ಯದ ಮಿತಿಯ
ಮೀರಿ ಹರಿದುಕ್ಕಿ ಹೊರದೋರುತಿರಲು,
ಮೋಸಹೋಗಲ್ಕಿರುವ ಕುರುರಾಜನಿಂದಲೇ
ಮೋಸಹೊಂದಿದನೆಂದು ಶಂಕಿಸುವೆನು. ॥೫೪॥

(ಪ್ರಕಾಶವಾಗಿ) ಪೌತ್ರ, ದುರ್ಯೋಧನ, ನನಗೆ ವಿರಾಟನೊಡನೆ ಒಳಗೊಳಗೇ ವೈರವುಂಟು. ಅಲ್ಲದೆ ನಿನ್ನ ಯಜ್ಞದರ್ಶನಕ್ಕೆ ಬರಲಿಲ್ಲವೆಂದೂ. ಆದ್ದರಿಂದ ಅವನ ಗೋವುಗಳನ್ನು ಹಿಡಿದು ಬಿಡೋಣ.

ದ್ರೋಣ— (ಮಿಕ್ಕವರಿಗೆ ಕೇಳದಂತೆ) ಭೋ ಗಾಂಗೇಯ, ಪೂಜ್ಯ ವಿರಾಟೇಶ್ವರನು ನನಗೆ ಪ್ರಿಯ ಶಿಷ್ಯನಲ್ಲವೆ? ಆದೇಕೆ ಅವನ ಗೋವುಗಳನ್ನು ಹಿಡಿಯಬೇಕು?

ಭೀಷ್ಮ— (ಮಿಕ್ಕವರಿಗೆ ಕೇಳದಂತೆ) ಬ್ರಾಹ್ಮಣ ಸಹಜವಾದ ಸರಳ ಬುದ್ಧಿಯುಳ್ಳವನೇ,

ರಥಶಬ್ದ ಕಿವಿಗಿಡಿಯೆ ಕೇಳಿ ಧರ್ಷಿತರಾಗಿ
ಕೆರಳುವರು ಪಾಂಡವರು ಕೂಡೆ.
ಅವರಲುಂಟೈ ಕೃತಜ್ಞತ್ವ; ನಿನ್ನಿಷ್ಟಾರ್ಥ
ನೆಲಸಿಹುದು ಗೋಗ್ರಹಣದಲ್ಲೆ. ॥೫೫॥

ಭಟ— ಜಯವಾಗಲಿ ಮಹಾರಾಜರಿಗೆ. ರಥಗಳೆಲ್ಲವೂ ನಗರ ಪ್ರವೇಶಕ್ಕೆ (ಹೊರಡಲು) ಸಜ್ಜಾಗಿವೆ.

ದುರ್ಯೋಧನ —

ಈ ರಥಗಳಿಂದಲೇ ಬೇಗವನ ಗೋವುಗಳ ಹಿಡಿಯುವುದು.
ಯಜ್ಞದಲಿ ಶಾಂತವಾಗಿದ್ದ ಗದೆ ಮತ್ತೆನ್ನ ಕೈಗೆ ಬಹುದು. ॥ ೫೬ ॥

ದ್ರೋಣ — ಆದರಿಂದ ತರಲೆನ್ನ ರಥವನಾಳ್ಗಳು.

ಶಕುನಿ — ತಹುದು

ನನ್ನಾನೆಯನು

ಕರ್ಣ — ಗಂಡ ಮೆರೆವುದಕೆ ಕುದುರೆಗಳ

ಹೂಡಿ ತೇರನು ತಂದು ನಿಲ್ಲಿಸಲಿ ಬೇಗಿಲ್ಲಿ

ಭೀಷ್ಮ — ತವಕಿಸುತಲಿಹುದೆನ್ನ ಮನ ವಿರಾಟನ ಪುರಕೆ

ನಡೆವುದಕೆ, ಬಿಲ್ಲ ತರುವುದು ಬೇಗ.

ಎಲ್ಲರೂ — ಬಿಲ್‌ಬಿಟ್ಟು

ತಾವಿಲ್ಲೆ ನಿಲ್ಲುವುದು ; ಆಜ್ಞೆಗಡಿಯಾಳ್ಗಳಾವು. ॥ ೫೭ ॥

ದ್ರೋಣ — ಮಗನೇ, ದುರ್ಯೋಧನಾ, ನಾವು ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ನೋಡಬಯಸುತ್ತೇವೆ.

ದುರ್ಯೋಧನ — ತಮಗೆ ಹೇಗೆ ಇಷ್ಟವೋ ಹಾಗೇ ಆಗಲಿ.

ದ್ರೋಣ — ವತ್ಸ, ಗಾಂಧಾರರಾಜ, ಈ ಗೋಗ್ರಹಣದಲ್ಲಿ ನಿನ್ನದಪ್ಪ ಮೊದಲನೆಯ ರಥ.

ಶಕುನಿ — ಆಗಬಹುದು. ಮೊದಲು ಮಾಡತಕ್ಕದ್ದು.

( ಎಲ್ಲರೂ ಹೋಗುತ್ತಾರೆ )

## ಮೊದಲನೆಯ ಅಂಕ ಮುಗಿಯಿತು

---

# ಎರಡನೆಯ ಅಂಕ

( ಬಳಿಕ ಮುದಿಗೊಲ್ಲನು ಪ್ರವೇಶಿಸುತ್ತಾನೆ )

**ಮುದಿಗೊಲ್ಲ**— ನಮ್ಮ ಹಸುಗಳು ಬರಡಾಗದಿರಲಿ! ಗೊಲ್ಲಿತಿಯರು ಮುತ್ತೈದೆಯರಾಗಿರಲಿ! ನಮ್ಮ ದೊರೆ ವಿರಾಟಮಹಾರಾಜನು ಒಕ್ಕೊಡೆಯ ನೆಲದೊಡೆಯನಾಗಲಿ! ವಿರಾಟಮಹಾರಾಜನ ವರ್ಷ ವರ್ಧಂತಿಯ ಗೋದಾನಕ್ಕಾಗಿ ಈ ಪಟ್ಟಣದ ಉದ್ಯಾನದ ಬೀದಿ ಯಲ್ಲಿ ಹಸುಗಳನ್ನು ಬಿಟ್ಟುಕೊಂಡು ಬರಲು ಗೊಲ್ಲಹುಡುಗರೂ ಹುಡುಗಿಯರೂ ಎಲ್ಲರೂ ಮಂಗಳವಾಗಿ ಸಿಂಗಾರ ಮಾಡಿಕೊಂಡಿ ದ್ದಾರೆ ಇವರಲ್ಲಿ ಹಿರಿತನ ಪಡೆದು ನಲಿಯುತ್ತೇನೆ. (ನೋಡಿ) ಏನಿದು? ಈ ಕಾಗೆ ಒಣಮರದ ಮೇಲೆ ಕೂತು ಒಣಕೊಂಬೆಗೆ ಕೊಕ್ಕು ಕುಟ್ಟುತ್ತ ಸೂರ್ಯನ ಕಡೆಗೆ ತಿರುಗಿಕೊಂಡು ಕೆಟ್ಟ ದನಿ ಯಿಂದ ಕೂಗುತ್ತಿದೆಯಲ್ಲಾ! ಕ್ಷೇಮವಾಗಲಿ, ಕ್ಷೇಮವಾಗಲಿ, ನಮಗೂ ನಮ್ಮ ದನಗಳಿಗೂ! ಇವರಿಗೆ ಹಿರಿಯನಾಗಿ ಗೊಲ್ಲ ಹುಡುಗರನ್ನೂ ಹುಡುಗಿಯರನ್ನೂ ಕರೆಯುತ್ತೇನೆ (ತಿರುಗಿ ನೋಡಿ) ಎಲಾ ಗೋಮಿತ್ರಕಾ, ಗೋಮಿತ್ರಕಾ.

( ಪ್ರವೇಶಿಸಿ )

**ಗೋಮಿತ್ರಕ** — ಮಾವಾ, ಕೈಮುಗಿದೆ.

**ಮುದಿಗೊಲ್ಲ**— ಶಾಂತಿಯಾಗಲಿ, ಶಾಂತಿಯಾಗಲಿ, ನಮಗೂ ನಮ್ಮ ದನ ಗಳಿಗೂ! ಎಲಾ, ಗೋಮಿತ್ರಕಾ, ವಿರಾಟಮಹಾರಾಜನ ವರ್ಷ ವರ್ಧಂತಿಯ ಗೋದಾನಕ್ಕಾಗಿ ಪಟ್ಟಣದ ಉದ್ಯಾನದ ಬೀದಿಯಲ್ಲಿ ದನಗಳನ್ನು ಬಿಟ್ಟುಕೊಂಡು ಬರಲು ಗೊಲ್ಲಹುಡುಗರೂ ಹುಡುಗಿ ಯರೂ ಎಲ್ಲರೂ ಮಂಗಳವಾಗಿ ಸಿಂಗಾರ ಮಾಡಿಕೊಂಡಿದ್ದಾರೆ. ಎಲಾ, ಗೋಮಿತ್ರಕಾ, ಗೊಲ್ಲ ಹುಡುಗರನ್ನೂ ಹುಡುಗಿಯರನ್ನೂ ಕೂಗು.

ಗೋಮಿತ್ರಕ— ಅಪ್ಪಣೆ, ಮಾವ. ಗೋರಕ್ಷಿಣಿಕೇ, ಘೃತಪಿಂಡಾ, ಸ್ವಾಮಿನೀ, ವೃಷಭದತ್ತಾ, ಕುಂಭದತ್ತಾ, ಮಹಿಷದತ್ತಾ, ಬನ್ನಿ, ಬನ್ನಿ, ಬೇಗ (ಬನ್ನಿ)!

(ಬಳಿಕ ಎಲ್ಲರೂ ಪ್ರವೇಶಿಸುತ್ತಾರ)

ಎಲ್ಲರೂ— ಮಾವಾ, ಕೈಮುಗಿದೆವು

ಮುದಿಗೊಲ್ಲ— ಒಳ್ಳೆಯದಾಗಲಿ, ಒಳ್ಳೆಯದಾಗಲಿ, ನಮಗೂ ನಮ್ಮ ದನಗಳಿಗೂ. ಗೊಲ್ಲ ಹುಡುಗರಿಗೂ ಹುಡುಗಿಯರಿಗೂ ಒಳ್ಳೆಯದಾಗಲಿ. ವಿರಾಟಮಹಾರಾಜನ ವರ್ಷವರ್ಧಂತಿಯ ಗೋದಾನಕ್ಕಾಗಿ ಪಟ್ಟಣದ ಈ ಉದ್ಯಾನದ ಬೀದಿಯಲ್ಲಿ ಬರುವುದಕ್ಕೆ ಸಜ್ಜಾಗಿವೆ ನಮ್ಮ ದನಗಳು ಆ ಹೊತ್ತಿನವರೆಗೂ ಹಾಡುತ್ತಾ ಕುಣಿಯುತ್ತಾ ಇರೋಣ.

ಎಲ್ಲರೂ— ಮಾವನ ಅಪ್ಪಣೆ. (ಎಲ್ಲರೂ ಕುಣಿಯುತ್ತಾರೆ)

ಮುದಿಗೊಲ್ಲ— ಹೀ, ಹೀ! ಸೊಗಸಾಯ್ತು, ಕುಣಿತ! ಸೊಗಸಾಯ್ತು, ಹಾಡು! ನಾನೂ ಸ್ವಲ್ಪ ಕುಣೀತೀನಿ (ಕುಣಿಯುತ್ತಾನೆ)

ಎಲ್ಲರೂ— ಹಾ, ಹಾ! ಮಾವಾ, ಬಹಳ ಹೆಚ್ಚಾಗಿ ದೂಳೆದ್ದುಬಿಟ್ಟಿತು!

ಮುದಿಗೊಲ್ಲ— ಬರಿಯ ದೂಳೀ ಅಲ್ಲ, ಶಂಖದುಂದುಭಿಗಳ ಸದ್ದೂ ಎದ್ದಿದೆ.

ಎಲ್ಲರೂ— ಹಾ, ಹಾ! ಮಾವಾ, ಹಗಲ ತಿಂಗಳ ಬೆಳಕಿನಂತೆ ಬೆಳ್ಳಗಿರುವ ದೂಳು ಮಂಡಲವನ್ನು ಮುಸುಕಿಕೊಂಡು ಸೂರ್ಯ ಇದಾನೊ, ಇಲ್ಲವೊ ?

ಗೋಮಿತ್ರಕ— ಹಾ, ಹಾ! ಮಾವಾ, ಇವರು ಯಾರೋ ಮನುಷ್ಯರು ಮೊಸರಿನ ಗರಣೆಯಂತೆ ಬೆಳ್ಳಗಿರುವ ಕೊಡೆ ಹಿಡಿಸಿಕೊಂಡು ಕುದುರೆ ಬಂಡಿ ಹತ್ತಿಕೊಂಡು ಹಟ್ಟಿಯಲ್ಲೆಲ್ಲಾ ಓಡಾಡುತ್ತಿದಾರೆ, ಕಳ್ಳರು!

ಮುದಿಗೊಲ್ಲ— ಹೀ, ಹೀ! ಅಂಬಿನ ಮಳೆ ಎದ್ದಿತು! ಹುಡುಗರಾ, ಬೇಗ ಮನೆ ಸೇರಿಕೊಂಡು ಬಿಡಿ

ಎಲ್ಲರೂ— ಮಾವನ ಅಪ್ಪಣೆ. (ಹೋಗುತ್ತಾರೆ)

ಮುದಿಗೊಲ್ಲ— ಹಾ, ಹಾ! ನಿಲ್ಲಿ, ನಿಲ್ಲಿ! ಹೊಡೆಯಿರಿ, ಹೊಡೆಯಿರಿ! ಹಿಡಿಯಿರಿ, ಹಿಡಿಯಿರಿ! ಈ ಸುದ್ದಿಯನ್ನು ವಿರಾಟ ಮಹಾರಾಜರಿಗೆ ಅರಿಕೆ ಮಾಡೋಣ (ಹೋಗುತ್ತಾನೆ)

**ಪ್ರವೇಶಕ ಮುಗಿಯಿತು**

---

(ಬಳಿಕ ಭಟನು ಪ್ರವೇಶಿಸುತ್ತಾನೆ)

ಭಟ— ಎಲೆ ಎಲೈ, ಅರಿಕೆ ಮಾಡಿ, ಅರಿಕೆ ಮಾಡಿ, ಮಹಾರಾಜ ವಿರಾಟೇಶ್ವರನಿಗೆ—"ಕಳ್ಳಕೆಲಸದಿಂದ ಪರಾಕ್ರಮ ಮುಚ್ಚಿ ಹೋಗಿರುವ ಧೃತರಾಷ್ಟ್ರನ ಮಕ್ಕಳು ಈ ಹಸುಗಳನ್ನು ಹರಣ ಮಾಡಿಕೊಂಡು ಹೋಗುತ್ತಿದ್ದಾರೆ" ಎಂದು.

"ಅಲ್ಲಿಯಾದರೋ,

ಓಡುತಿಹ ಕರುಗಳಿಂ, ವ್ಯಥೆಗೊಂಡ ಹಸುಗಳಿಂ,
ನೋಡಿ ಮಖದಲಿ ದಿಗಿಲುದಳೆದ ಗೂಳಿಗಳಿಂ,
ಕಳವಳದ ಕೂಗೆದ್ದು ಕಲಕಿತೆಲ್ಲೆಡೆಗಳಲು.
ಪಶುವಿಂಡು ಚೆದರಿಹುದು; ದುಗುಡ ಬೀರುವುದು." ||೧||

ಎಂದು (ಅರಿಕೆ ಮಾಡಿ)

(ನೇಪಥ್ಯದಲ್ಲಿ)

ಏನು, ಧೃತರಾಷ್ಟ್ರನ ಮಕ್ಕಳಿಂದೆಯಾ?

ಭಟ— ಆರ್ಯ, ಹೌದು.

(ಪ್ರವೇಶಿಸಿ)

ಕಾಂಚುಕೀಯು— ಇದು ತಕ್ಕದ್ದೇ (ಸರಿ), ಒಡಹುಟ್ಟಿದವರಿಗೂ ದ್ರೋಹ ಮಾಡಿದವರಿಗೆ. ಇವರಾದರೋ,

ಮೈಗಾಪು ಕೈಗಾಪು ಬೆರಳ್ಗಾಪು ಬಿಗಿದು,
ಸಜ್ಜುಬಿಲ್ಗಳನು ಕೊಂಡಣಿತೇರನೇರಿ,
ಅಸ್ತ್ರಬಲದಲಿ ಸೊಕ್ಕಿ, ಕಳಕೆ ಸಜ್ಜಾಗಿ,
ದೊರೆಯ ಹಗೆಯನು ಗೋವುಗಳಲಿ ತೀರಿಪರು. ॥ ೨ ॥

ಜಯಸೇನಾ, ಜನ್ಮನಕ್ಷತ್ರದ ಕರ್ಮಗಳಲ್ಲಿ ತೊಡಗಿರುವ ಮಹಾರಾಜರಿಗೆ ಅಕಾಲದಲ್ಲಿ ಬಿನ್ನವಿಸುವುದು ಕೋಪವನ್ನುಂಟುಮಾಡುತ್ತದೆ. ಆದ್ದರಿಂದ ಪುಣ್ಯಾಹ ಮುಗಿದ ಮೇಲೆ ಅರಿಕೆ ಮಾಡುತ್ತೇನೆ.

ಭಟ— ಆರ್ಯ, ತಡಮಾಡತಕ್ಕದ್ದಲ್ಲ ಈ ಕೆಲಸ. ಬೇಗ ಅರಿಕೆ ಮಾಡಬೇಕು.

ಕಾಂಚುಕೀಯ— ಇಗೋ, ಅರಿಕೆ ಮಾಡುತ್ತೇನೆ

(ಬಳಿಕ ದೊರ ಪ್ರವೇಶಿಸುತ್ತಾನೆ)

ದೊರೆ— ತರವಲ್ಲ! ತೇರುಲಿಯೊ ಎಂದಳುಕಿ ತಲ್ಲಣಿಸಿ
ಚೆದರಲೆಳೆಗರು ನಮ್ಮ ತುರುಪಿಂಡನುಯ್ಯುವರು
ಬಳಿದೊಟ್ಟು ತಣ್ಗಂದ ತೊಡೆದೆನ್ನ ತುಂಬುದೊಳ್-
ಕೈಯೊ, ನಾಚದೆ ತೆರವನೆಳೆದುಣ್ಣುತಿಹುದು ॥ ೩ ॥

ಜಯಸೇನ, ಜಯಸೇನ!

(ಪ್ರವೇಶಿಸಿ)

ಭಟ— ಜಯವಾಗಲಿ, ಜಯವಾಗಲಿ, ಮಹಾರಾಜರಿಗೆ.

ದೊರೆ— ಸಾಕು, ಮಹಾರಾಜನೆಂಬ ಸೊಲ್ಲು! ತೊಳೆದುಹೋಯಿತು, ನನ್ನ ಕ್ಷತ್ರಿಯತನ! ಕಾಳಗದ ವಿವರವನ್ನು ಹೇಳು.

ಭಟ— ಮಹಾರಾಜ, ಅನಿಷ್ಟಗಳನ್ನು ವಿವರಿಸಬಾರದು. ಒಟ್ಟಿನಲ್ಲಿ ಇಷ್ಟು.

ತೇರ ದೂಳಿಂದೊಂದೆ ಬಣ್ಣವನು ತಳೆದಿಸೆವ
ಗೋವುಗಳ ಮೈಯೊಳ್
ತೋರುವುವು ಚಾವಟಿಗಳಾಡುತಿರೆ ಬಗೆ ಬಗೆಯ
ಬಣ್ಣವಿಂಗಡಗಳ್. ॥ ೪ ॥

ದೊರೆ— ಆದ್ದರಿಂದ

ಬಿಲ್ಲ ತಾ. ಬೇಗೆನ್ನ ತೇರನಣಿಮಾಡುವುದು.
ಒಲವುಳ್ಳವರು ತಾವೆ ನನ್ನನನುಸಿರಿಸಿ ಬಹುದು.
ತುರುಗಾಗಿ ಕೊಳುಗುಳದಿ ಯತ್ನ ನಿಷ್ಫಲವಲ್ಲ.
ಸತ್ತರೂ ಹೆಸರಹುದು; ಬಿಡಿಸಿದರೋ ಧರ್ಮವಹುದು. ||೫||

ಭಟ— ಮಹಾರಾಜರ ಅಪ್ಪಣೆ. (ಹೋಗುತ್ತಾನೆ)

ದೊರ— ಓಹೋ, ಏನಿರಬಹುದು ದುರ್ಯೋಧನನಿಗೆ ನನ್ನ ಮೇಲಿನ ಹಗೆ? ಆ! ಯಜ್ಞದರ್ಶನಕ್ಕ ಬರಲಿಲ್ಲವೆಂದಿರಬೇಕು. ಹೇಗೆ ತಾನೆ ಹೋಗಲಿ? ಕೀಚಕರ ವಿನಾಶದಿಂದ ನಮ್ಮ ಸಂಕಟ ಮಿತಿ ಮೀರಿಹೋಯಿತು. ಹಾಗಲ್ಲದೆ ಇದ್ದರೆ, ಪರೋಕ್ಷದಲ್ಲಾದರೂ ಪಾಂಡವರೊಡನೆ ಸ್ನೇಹವುಳ್ಳವನೆಂದಿರಬಹುದೆ? ಏನೇ ಆಗಲಿ, ಯುದ್ಧ ಮಾಡಲೇಬೇಕು. ಹಸ್ತಿನಪುರದಲ್ಲಿ ವಾಸಮಾಡಿದವರಾದ್ದರಿಂದ ಭಗವಾನರು ದುರ್ಯೋಧನನ ಶೀಲವನ್ನು ಬಲ್ಲವರಾಗಿರಬೇಕು. ಅಥವಾ,

ದುರ್ಯೋಧನನ ದೋಷಗಳನೊರೆಯುರಿವರು.
ಆದರೇನ್? ಫಲವೆಳಸುವಾ ಕಾರ್ಯವಾಸಿ
ಕೇಳಿಯೇ ಕೇಳುವನು ಬೇಸರದೆ, ಬಿಡದೆ ||೬||

ಯಾರಲ್ಲಿ?

(ಪ್ರವೇಶಿಸಿ)

ಭಟ— ಜಯವಾಗಲಿ ಮಹಾರಾಜರಿಗೆ.

ದೊರೆ— ಭಗವಾನರನ್ನು ಸ್ವಲ್ಪ ಬರಹೇಳು

ಭಟ— ಮಹಾರಾಜರ ಅಪ್ಪಣೆ. (ಹೋಗುತ್ತಾನೆ)

(ಬಳಿಕ ಭಗವಾನನು ಪ್ರವೇಶಿಸುತ್ತಾನೆ)

ಭಗವಾನ್— (ಸುತ್ತಲೂ ನೋಡಿ) ಓಹೋ! ಏನಿರಬಹುದಿದು?

ಆನೆಯಣಿಗೊಳ್ಳುವುವು ; ಕುದುರೆ ಮರೆದೊಟ್ಟಿಹವು ;
ತೇರ್ ನೊಗವ ಬಿಗಿದಿಹವು, ಭಟರು ಸಜ್ಜಾಗಿಹರು.
ಸಿದ್ಧತೆಯ ಕಂಡು ಮುನ್ನರಿಯುದಾ ದಿಗಿಲೆನಗೆ.
ನನ್ನ ಕುರಿತಲ್ಲ, ದೃಢಮತಿ ನಾನು ; ದುಡುಕರವರು. ॥ ೭ ॥

(ಹತ್ತಿರ ಹೋಗಿ) ಜಯವಾಗಲಿ, ಜಯವಾಗಲಿ.

ದೊರೆ— ಭಗವನ್, ನಾನು ವಿರಾಟ, ವಂದಿಸುತ್ತೇನೆ.

ಭಗವಾನ್ — ಸ್ವಸ್ತಿ

ದೊರೆ— ಅನುಗೃಹೀತನಾದೆ ಭಗವನ್, ಇದೋ ಪೀಠ ಕುಳಿತುಕೊಳ್ಳ ಬೇಕು.

ಭಗವಾನ್— ಆಗಲಿ (ಕುಳಿತುಕೊಂಡು) ಅಯ್ಯಾ ರಾಜಾ,

ಉದ್ಯೋಗ ತೊಡಗಿರುವುದೇಕೆ ?
ಸಿರಿಗೆ ತಣಿವಿಲ್ಲದುದಕೊ ?
ಸೊಕ್ಕಿದರನಡಗಿಪುದಕೊ ?
ಪೀಡಿತರ ಬಿಡಿಸುವುದಕೊ ? ॥ ೮ ॥

ದೊರೆ— ಭಗವನ್, ಗೋಗ್ರಹಣದಿಂದ ನನಗೆ ಅವಮಾನವಾಗಿದೆ.

ಭಗವಾನ್— ಯಾರಿಂದ ?

ದೊರೆ— ಧಾರ್ತರಾಷ್ಟ್ರರಿಂದ.

ಭಗವಾನ್— ಧಾರ್ತರಾಷ್ಟ್ರರಿಂದಲೇ ? (ತನ್ನಲ್ಲಿ ತಾನು) ಅಯ್ಯೋ ಕಷ್ಟ.

ಜ್ಞಾತಿತ್ವವೆಂಬುದಿದು ನಡುಗಿಪುದು ಲೋಕದಲಿ
ಮರ್ಯಾದೆವಂತರಾದವರ ಮನವ.
ಅವರು, ವೈರಪ್ರಿಯರು, ಮಾಡಲಪರಾಧವನು
ನಾವೆ ಮಾಡಿದ ಹಾಗೆ ತೋರುತಿಹುದು. ॥ ೯ ॥

ದೊರೆ— ಭಗವನ್, ಅದೇನು ಯೋಚಿಸುವಿರಿ ?

ಭಗವಾನ್— ಏನೂ ಇಲ್ಲ. ಅವರಿಗಾಗಿ ಮರುಗುತ್ತಿದ್ದೇನೆ.

**ದೊರೆ**— ಇಂದಿನಿಂದ ಅವರು ಉಡುಗಿ ಅಡಗುತ್ತಾರೆ. ಶಕ್ತನಾಗಿದ್ದರೂ ಯುಧಿಷ್ಠಿರನು ತಾಳಿಕೊಂಡನೆಂದರೆ ನಾನು ತಾಳುವುದಿಲ್ಲ.

**ಭಗವಾನ್** — ಹೌದು, ನಿಜ. (ತನ್ನಲ್ಲಿ ತಾನು)

ನೆಲದಮೇಲೆಲೆ ಹಾಸಿ ಮಲಗಿದುದು, ನಾಡ ಬಿ
ಟ್ಟಲೆದುದಾ ದ್ರೌಪದಿಯ ಮಾನಭಂಗ,
ಮರೆವೇಷದೊಟ್ಟುದಾಶ್ರಯದ ಬಾಳ್ವೆಯಿವೆಲ್ಲ
ಮೇಲಾದುದೆನ್ನ ಸ್ವೈರಣೆ ತಿಳಿಯಲಿಂತು. ॥ ೧೦ ॥

( ಪ್ರವೇಶಿಸಿ )

**ಭಟ**— ಜಯವಾಗಲಿ, ಮಹಾರಾಜರಿಗೆ.

**ದೊರೆ**— ಮತ್ತೇನು ಮಾಡುತ್ತಾನೆ, ದುರ್ಯೋಧನ?

**ಭಟ**— ದುರ್ಯೋಧನನು ಮಾತ್ರವೇ ಅಲ್ಲ, ಭೂಮಿಯಲ್ಲಿರುವ ರಾಜರೆಲ್ಲ ಬಂದಿದ್ದಾರೆ.

ದ್ರೋಣ ಭೀಷ್ಮರು, ಜಯದ್ರಥ ಶಲ್ಯ ಶಕುನಿಗಳು,
ಅಂಗರಾಜನು, ಕೃಪನು — ಎಲ್ಲ ಬಂದಿಹರು.
ಅವರ ತೇರ್ ನೆಗೆದು ಪಟವಲುಗುವಾ ಗುಡಿಯಿಂದೆ
ಭಂಗಗೊಂಡೆವು ನಾವು; ಕಣೆಗಳಿಂದಲ್ಲ. ॥೧೧॥

**ದೊರೆ** — ( ಎದ್ದು ಕೈಮುಗಿದು ) ಏನು, ಗಾಂಗೇಯನೂ ಬಂದನೇ?

**ಭಗವಾನ್**— ಭಲೆ, ಅವಮಾನ ಹೊಂದಿದರೂ ಸಮುದಾಚಾರವನ್ನು ಬಿಡಲಿಲ್ಲ. ಆಹಾ!

ಏಕೆ ಬಂದನೊ ಕಾಣೆ ಕುರುಕುಲದ ಹಿರಿಯ ಗುರು?
ಪೂಜ್ಯೆ ಸಂದುದನೆನಗೆ ನೆನಪುಗುಡಲಿರಬಹುದು! ॥ ೧೨ ॥

**ದೊರೆ** — ಯಾರಲ್ಲಿ?

( ಪ್ರವೇಶಿಸಿ )

**ಭಟ** — ಜಯವಾಗಲಿ ಮಹಾರಾಜರಿಗೆ.

ದೊರೆ — ಸೂತನನ್ನು ಕರೆದುಕೊಂಡು ಬಾ.

ಭಟ — ಮಹಾರಾಜರ ಅಪ್ಪಣೆ. (ಹೋಗುತ್ತಾನೆ)

(ಪ್ರವೇಶಿಸಿ)

ಸೂತ — ಜಯವಾಗಲಿ ಆಯುಷ್ಮಂತನಿಗೆ.

ದೊರೆ — ತೇರ ತಾ ಬೇಗೆನಗೆ ದೊರೆತಿಹನು ನೆಗಳ್ತೆವಡೆ
ದತಿಥಿ ರಣಕೆ.
ತಣಿಸುವೆನು ಕಣೆಗಳಿಂ ಭೀಷ್ಮನನು. ಗೆಲ್ವೆನೆಂ
ದೆಣಿಸೆ ನಾನು. ॥ ೧೩ ॥

ಸೂತ — ಆಯುಷ್ಮಂತನ ಅಪ್ಪಣೆಯ ಪ್ರಕಾರ. ಆಯುಷ್ಮನ್,

ಹಗೆದಂಡನೊಡೆದೊಡೆದು ಪಳಗಿದಾ ತೇರೇರಿ
ನಡೆದನುತ್ತರ ತನ್ನ ರಥವಿದ್ಯೆಯರಿವ ಮೆರೆಯೆ. ॥ ೧೪ ॥

ದೊರೆ — ಏನು, ಹೊರಟು ಹೋದನೆ, ಕುಮಾರ?

ಭಗವಾನ್ — ಅಯ್ಯಾ ರಾಜ, ಹಿಂದಿರುಗಿಸು, ಹಿಂದಿರುಗಿಸು ಕುಮಾರನನ್ನು.

ಗುಣದೋಷವೆಣಿಸನುರವಣಿಸಿ ಕಾದುವನೆಳೆಯನಿವನು.
ಸುಡದೆ ಬಿಡದಾರನೂ ಬಳಿಸಾರೆ ಕಾಳಗದ ಕಿಚ್ಚು.
ಧಾರ್ತರಾಷ್ಟ್ರರೊ ತಾವದೇನನೂ ಬಿಡರು ಹಿಂಜರಿದು.
ಸೋಲು ನಿನಗೆಂದಲ್ಲ. ಯುದ್ಧದೋಷಗಳೊರೆವೆನಿಂತು. ॥೧೫॥

ದೊರೆ — ಹಾಗಾದರೆ ಬೇಗ ಮತ್ತೊಂದು ರಥವನ್ನು ಸಜ್ಜುಗೊಳಿಸು.

ಸೂತ — ಆಯುಷ್ಮಂತನ ಅಪ್ಪಣೆ.

ದೊರೆ — ಅಥವಾ, ಸ್ವಲ್ಪ ಬಾ ಇಲ್ಲಿ.

ಸೂತ — ಆಯುಷ್ಮಾನ್, ಇಗೋ ಬಂದೆ.

ದೊರೆ— ನಡಸಲಿಲ್ಲೇಕೆ ನೀನಾ ಕುಮಾರನ ರಥವ ?
ಬೆಸಸಿದನೊ ? ಅರಮನೆಯ ಸಾರಥಿಯು ನೀನಲ್ಲವೋ ? ॥ ೧೬ ॥

ಸೂತ— ಆಯುಷ್ಮಂತನು ಪ್ರಸನ್ನನಾಗಬೇಕು. ನಾನು ಸಾರಥಿಗಳ ಸಂಪ್ರದಾಯವನ್ನನುಸರಿಸಿ ರಥವನ್ನು ಸರಿಯಾಗಿ ಸಜ್ಜುಗೊಳಿಸಿ ತೆಗೆದುಕೊಂಡು ಹೋದೆ. (ಆದರೆ) ಕುಮಾರನು,

ಪರಿಹಾಸ್ಯಕೋ ಕಾಣೆ, ಕೌಶಲ್ಯವೇನುಂಟೊ ನಾನರಿಯೆ,
ನನ್ನ ಕಡೆಗಣಿಸಿ ಸಾರಥ್ಯಕೆ ಬೃಹನ್ನಳೆಯ ನೇಮಿಸಿದನು. ॥ ೧೭ ॥

ದೊರೆ— ಏನು, ಬೃಹನ್ನಳೆಯನ್ನೆ ?

ಭಗವಾನ್— ಮಹಾರಾಜಾ, ಕಳವಳವೇಕೆ ?

ಗಾಲಿದೂಳಿದ್ದು ನೇಸರ ಮುಸುಕುವಂತೆ
ತೇರನೆಸಗುತ ಬೃಹನ್ನಳೆ ತಾನು ನಡೆಯೆ,
ಕ್ಷಣದಲರಿಗಳ ಗಾಲಿಸದ್ದಿನಿಂ ಮುರಿದು
ಅಂಬಿಲ್ಲದಿದ್ದರೂ ರಥವೆ ಗೆಲ್ಲುವುದು. ॥ ೧೮ ॥

ದೊರೆ— ಹಾಗಾದರೆ ಬೇಗ ಮತ್ತೊಂದು ರಥವನ್ನು ಅಣಿಮಾಡು.

ಸೂತ— ಆಯುಷ್ಮಂತನ ಅಪ್ಪಣೆಯ ಪ್ರಕಾರ. (ಹೋಗುತ್ತಾನೆ)

(ಪ್ರವೇಶಿಸಿ)

ಭಟ— ಮುರಿದು ಹೋಯಿತು ಕುಮಾರನ ರಥ !

ದೊರೆ— ಏನು, ಮುರಿಯಿತೆ ?

ಭಗವಾನ್— ಏನೇನು, ಮುರಿದು ಹೋಯಿತೆ ?

ಭಟ— ಲಾಲಿಸಬೇಕು ಮಹಾರಾಜರು.

ಹಲವು ರಣಪಟುರಿಪುಗಳಿಂದ
ಇಡಿಕಿರಿಯೆ ಕುದುರೆಗಳ ದಾರಿ,
ಮುರಿದು ರಥ ಮರೆಹಳುವನೆಳಸಿ
ನಡೆಯಿತಾ ಮಸಣದೆಡೆಗೆ. ॥ ೧೯ ॥

ಭಗವಾನ್ —( ತನ್ನಲ್ಲೆ) ಆಃ! ಅಲ್ಲೇ ಇದೆಯಲ್ಲವೆ ಗಾಂಡೀವ! (ಪ್ರಕಾಶವಾಗಿ) ಅಯ್ಯಾ ರಾಜ,

ಶಕುನವೊಂದಾಯ್ತು ತೇರ್ ಮಸಣದಾ ಕಡೆಗೆ ನಡೆಯೆ.
ಮಸಣವಾಗುವುದಯ್ಯ ಧಾರ್ತರಾಷ್ಟ್ರರು ನಿಂದ ಬಳಿಯೆ. ||೨೦||

ದೊರೆ — ಭಗವನ್, ಅಕಾಲದಲ್ಲಿ ನಿಮ್ಮದಿಯ ಮಾತು ಸಿಟ್ಟುಬರಿಸುತ್ತದೆ.

ಭಗವಾನ್ — ಸಿಟ್ಟೇಕೆ? ನಾನೆಂದೂ ಸುಳ್ಳು ಹೇಳಿಲ್ಲ.

ದೊರೆ — ಆ! ಹೌದು, ನಿಜ ಹೋಗು, ಮತ್ತೆ ವರ್ತಮಾನ ತಿಳಿದುಕೊಂಡು ಬಾ.

ಭಟ — ಮಹಾರಾಜರ ಅಪ್ಪಣೆ. (ಹೋಗುತ್ತಾನೆ)

ದೊರೆ — ಯಾರಿವನು? ತಟ್ಟನೀ ನೆಲವ ನಡುಗಿಸುವಂತೆ,
ಹೊಳೆ ಮುರಿದು ಮೊರೆವಂತೆ, ದನಿಯೆದ್ದುದೀ ಕ್ಷಣದಲಿ. ||೨೧||

ಏನಿದೀ ಸದ್ದು? ತಿಳಿದು ಬಾ

(ಪ್ರವೇಶಿಸಿ)

ಭಟ — ಜಯವಾಗಲಿ ಮಹಾರಾಜರಿಗೆ ಸ್ಮಶಾನದಲ್ಲಿ ಒಂದು ಗಳಿಗೆ ಕುದುರೆಗಳು ವಿಶ್ರಮಿಸಿಕೊಂಡ ಮೇಲೆ ಕುಮಾರನು . . . .

ಭಗವಾನ್ — ಇವನು ನನ್ನನ್ನು ಸುಳ್ಳನನ್ನಾಗಿ ಮಾಡಲಾರನು

ದೊರೆ — ಏನು ಮಾಡಿದನು ಕುಮಾರ?

ಭಟ — ನೂರಾರು ಕಣೆ ನಾಟಿ ಕಪ್ಪಾನೆಗಳನೆಲ್ಲ
ಕೆಂಪು ಮಾಡಿದನಲ್ಲಿ. ಕುದುರೆಯೋ ಕಾಲಾಳೊ
ಒಬ್ಬೊಬ್ಬ ನೂರಂಬ ತಾಳದವನಿಲ್ಲವಲ್ಲಿ.
ಅಂಬು ತುಂಬಿದ ತೇರ್ಗಳೆಲ್ಲವಂಬುಗಳಿಂದ
ನಡೆಗೆಟ್ಟುವಂಬಿನಿಂ ಮುಚ್ಚಿದುವು ದಾರಿಗಳು.
ಕರೆಯುತಿರುವುದು ಬಿಲ್ಲು ಕಟ್ಟುಗ್ರದಂಬುಹೊಳೆಯ. ||೨೨||

**ಭಗವಾನ್** — (ತನ್ನಲ್ಲಿ ತಾನು)

ಇದಕ್ಷಯದ ಬತ್ತಳಿಕೆ. ಇಂದ್ರನಾ ಖಾಂಡವದೊ
ಳಿಷ್ಟು ಮಳೆಹನಿ ಕರೆದುವಷ್ಟಂಬನೆಸೆದುದಂದು. ॥ ೨೩ ॥

**ದೊರೆ** — ಇನ್ನು ಶತ್ರುಗಳ ಸಮಾಚಾರವೇನು ?

**ಭಟ** — ಅದು ನಾನು ಕಂಡದ್ದಲ್ಲ ಸುದ್ದಿಗಾರರು ಹೀಗೆ ಹೇಳುತ್ತಾರೆ:

"ಚಾಪಘೋಷವ ದ್ರೋಣನದೆ ಇದೆಂದರಿತು ಹಿಂಜರಿದನ್
ಧ್ವಜದೊಳಂಬನು ಕಂಡು ನಾಕೆಂದು ಭೀಷ್ಮ ತಾನಿರಿಯನ್
ಕಣೆಗೆ ದಣಿದನು ಕರ್ಣನುಳಿದವರಿದೇನೆಂದು ನಡೆದರ್
ಭಯದೊಳಂ ಭಯವ ಗಣಿಸನು ಬಾಲನಭಿಮನ್ಯುವೊರ್ವನ್" ॥ ೨೪ ॥

ಭಗವಾನ್ — ಏನು, ಇಭಿಮನ್ಯು ಬಂದಿರುವನೆ ? ಅಯ್ಯಾ ರಾಜ,
ಇರ್ಕುಡಿಯ ದೇಜದಾ ಬೆಂಕಿಯಹ ಸೌಭದ್ರ
ಕಾದುತಿರೆ ಬೇರೊಬ್ಬ ಸಾರಥಿಯು ಕಳಿಸುವುದು.
ಮುಂಗಾಣದಳುಕುವಳು ಬೃಹನ್ನಳೆಯು ಅಲ್ಲಿ ॥ ೨೫ ॥

ದೊರೆ — ಆಗದು, ತಾವು ಹಾಗೆನ್ನಬಾರದು.

ರಾಮನಂಬುಗಳಿಂದ ಕವಚ ಕೊರೆಯದೆ ಹೋದ
ಭೀಷ್ಮನನು, ಮಂತ್ರಾಸ್ತ್ರಗಳ ಬಲ್ಲ ದ್ರೋಣನನು,
ಕರ್ಣನನು, ಮೇಣ್ ಜಯದ್ರಥನನುಳಿದಾ ದೊರೆಗ
ಳೆಲ್ಲರನು, ಬೆಂಗೊಡುವೊಲೆಸಗಿ, ಸೌಭದ್ರನನು
ಪೀಡಿಸನೆ ಕಣೆಗಳಿಂ ತಂದಯಾ ಹೆಸರಿಗಳುಕಿ?
ಒಂದಾದನೊಪ್ಪಡಂ ಕೆಳೆತನಕೆ ತಕ್ಕುದದು.
ಸಮವಯಸೆ ರಕ್ಷಿಸುವುದು. ॥ ೨೬ ॥

**ಭಟ** — ಕುಮಾರನ ಈ ರಥವಾದರೊ,

ಬಿಗಿಹಿಡಿಯೆ ತಿರುಗುವುದು; ಕೈಬಿಡಲದೋಡುವುದು ;
ಬಳಿಸಾರಿ ಪೀಡಿಸದು ; ಕೇಡೆಸಗ ಬಯಸದದು ;

ಬಳಿಬಳಿಯೆ ಬಲು ಚಪಲಗತಿಯಿಂದ ಸುಳಿಯುವುದು ;
ತೀರವನಿಗುಚಿತೋಪದೇಶ ಮಾಡುವ ವೊಲಿಹುದು. ‖ ೨೭ ‖

ದೊರೆ— ಹೋಗು, ಮತ್ತೆ ಸುದ್ದಿ ತಿಳಿದುಕೊಂಡು ಬಾ.

ಭಟ— ಮಹಾರಾಜರ ಅಪ್ಪಣೆಯ ಪ್ರಕಾರ. (ಹೋಗಿ ಬಂದು) ಜಯವಾಗಲಿ ವಿರಾಟೇಶ್ವರನಿಗೆ. ಸಂತೋಷದ ಸುದ್ದಿಯನ್ನು ಅರಿಕೆ ಮಾಡುತ್ತೇನೆ, ಮಹಾರಾಜರಿಗೆ. ಗೆದ್ದಾಯಿತು ಗೋಗ್ರಹಣ. ಓಡಿಹೋದರು ಧಾರ್ತರಾಷ್ಟ್ರರು.

ಭಗವಾನ್— ದೇವರ ದಯದಿಂದ ನೀನು ಏಳಿಗೆ ಹೊಂದಿದೆ.

ದೊರೆ— ಅಲ್ಲ, ಅಲ್ಲ ಇದು ತಮ್ಮ ಏಳಿಗೆ ಕುಮಾರನು ಈಗ ಎಲ್ಲಿದ್ದಾನೆ ?

ಭಟ— ಸಾಹಸ ತೋರಿಸಿದ ಯೋಧಪುರುಷರ ಸಾಹಸ ಕಾರ್ಯಗಳನ್ನು ಪುಸ್ತಕದಲ್ಲಿ ಬರೆಯುತ್ತಿದ್ದಾರೆ

ದೊರೆ— ಆಹಾ, ಈ ಕುಮಾರನ ಕೆಲಸ ಎಷ್ಟು ಮೆಚ್ಚತಕ್ಕದ್ದಾಗಿದೆ !

ಶ್ಲಾಘ್ಯಕಾರ್ಯವನೆಸಗಿ ಪೆಟ್ಟುಂಡ ಯೋಧರಿಗೆ
ಕಾಲಕಳೆಯದೆ ಗೈದ ಪೂಜೆ ಕಳೆವುದು ನೋವನು. ‖ ೨೮ ‖

ಬೃಹನ್ನಳೆ ಈಗ ಎಲ್ಲಿ ?

ಭಟ— ಪ್ರಿಯವಾರ್ತೆಯನ್ನು ತಿಳಿಸುವುದಕ್ಕೆ ಅಂತಃಪುರಕ್ಕೆ ಹೋದರು.

ದೊರೆ— ಬೃಹನ್ನಳೆಯನ್ನು ಸ್ವಲ್ಪ ಬರಹೇಳು.

ಭಟ— ಮಹಾರಾಜರ ಅಪ್ಪಣೆಯ ಪ್ರಕಾರ. (ಹೋಗುತ್ತಾನೆ)

(ಬಳಿಕ ಬೃಹನ್ನಳೆ ಪ್ರವೇಶಿಸುತ್ತಾಳೆ)

ಬೃಹನ್ನಳೆ— (ವಿಮರ್ಶಿಸಿ ನೋಡಿಕೊಂಡು)

ನಾರಿಯನು ಬಿಗಿದ ಗಾಂಡೀವದೊಡನೆನಗೊಂದು
ಗಳಿಗೆ ಹೋರಾಟವಾಯ್ತೆಂಬ ಪರಿವರ್ತಿಸುವ
ಬಳಕೆ ತಪ್ಪಿದ ಮುಷ್ಟಿ ಬಿಗಿಯಿಲ್ಲದಂತಾಯ್ತು.

ಕೈಗಾಪಿನೆಡೆ ಪಟುತೆಯಿಲ್ಲಾಯ್ತು. ಸಮಯದಲಿ
ಸಾಮರ್ಥ್ಯವುಡುಗಿತ್ತು. ಹೆಣ್ಣೆಂದು ಕುಗ್ಗಿದೆನು.
ಬಳಿಕ ಪರಿಚಯದಿಂದ ತನ್ನ ತಾನ್ ತಿಳಿದುದಾಯ್ತು.॥೨೯॥

ನಾನಾದರೊ,

ಈ ವೇಷದಿಂದ ಮಿಗೆ ನಾಚಿಕೆಯ ತಾಳಿ
ರಾಜರಾಜರ ನಡುವೆ ಬಿಲ್ಲ ನಾನೆಳೆದೆ.
ಸರಳು ಮಳೆಗರೆಯುತಿರೆ ಹಗೆಗಳೆದ್ದೋಡಿ
ದೂಳ್ ಬೇಗ ಕೆಸರಾಗಿ ನೆಲಕಿಳಿದುದಲ್ಲಿ ॥ ೩೦ ॥

ಅಯ್ಯೋ!

ಆಕಳನು ಗೆದ್ದೊಡಂ, ದೊರೆಗೆ ಜಯತಂದೊಡಂ,
ಇಲ್ಲ, ನನ್ನೀ ಮನಕೆ ಗೆಲವಿನಾನಂದ;
ದುಶ್ಶಾಸನನ ರಣದಿ ಹಿಡಿದು ಹೆಡೆಮುರಿಗಟ್ಟಿ
ತರಲಿಲ್ಲವೆಂದೀ ವಿರಾಟ ಪುರಕಿಂದು. ॥ ೩೧ ॥

ಉತ್ತರೆ ಪ್ರೀತಿಯಿಂದ ಕೊಟ್ಟ ಅಲಂಕಾರದಿಂದ ಸಿಂಗಾರ ಮಾಡಿಕೊಂಡು ರಾಜನನ್ನು ನೋಡುವುದಕ್ಕೆ ನಾಚಿಕೆಯಾಗುತ್ತದೆ. ಆದರೂ ವಿರಾಟೇಶ್ವರನನ್ನು ಕಾಣುತ್ತೇನೆ. (ಮುಂದೆ ಹೋಗಿ ನೋಡಿ) ಓಹೋ, ಆರ್ಯ ಯುಧಿಷ್ಠಿರನು! ಇವನು,

ಪ್ರಾಯದವನುತ್ತಮತಪೋವನವ ಮೆಚ್ಚಿದನು.
ಅರಸರರಸನು, ಪಾರ್ಥನಡೆವಳಿಯ ನೆಮ್ಮಿರುವನು.
ರಾಜ್ಯವನು ತೊರೆದೊಡಂ ಸಿರಿತುಂಬಿ ಮೆರೆಯುವನು.
ತ್ರಿದಂಡಗೊಂಡೊಡಂ ದಂಡಧಾರಕನಾಗನು. ॥ ೩೨ ॥

(ಹತ್ತಿರ ಬಂದು) ಭಗವನ್, ವಂದಿಸುತ್ತೇನೆ.

ಭಗವಾನ್ — ಸ್ವಸ್ತಿ.

ಬೃಹನ್ನಳೆ — ಜಯವಾಗಲಿ ಸ್ವಾಮಿಗೆ.

**ದೊರೆ** — ರೂಪ ಕಾರಣವಲ್ಲ ; ಕುಲವು ಕಾರಣವಲ್ಲ ;
ಮೇಲುಕೀಳರಲೆಲ್ಲ ಕರ್ಮ ಶೋಭಿಪುದು.
ಈ ರೂಪ ಮುನ್ನ (ನಗೆಗೀಡಾಗಿ) ಕೀಳಾಯ್ತು.
ಅದೆ ಮತ್ತೆ ಮೆಚ್ಚಿಕೆಗೆ ತಕ್ಕುದಾಯ್ತೀಗ. || ೩೩ ||

ಬೃಹನ್ನಳೇ, ಬಳಲಿರುವೆಯಾದರೂ ಮತ್ತೆ ನಿನ್ನನ್ನು ಬಳಲಿಸುತ್ತೇನೆ. ಕದನದ ವಿವರವನ್ನು ವಿಸ್ತರಿಸು.

**ಬೃಹನ್ನಳೆ** — ಕೇಳಬೇಕು, ಒಡೆಯರು.

**ದೊರೆ** — ದೊಡ್ಡ ವಿಚಾರ. ಸಂಸ್ಕೃತದಲ್ಲಿ* ಹೇಳು.

**ಬೃಹನ್ನಳೆ** — ಲಾಲಿಸಬೇಕು ಮಹಾರಾಜರು

(ಪ್ರವೇಶಿಸಿ)

**ಭಟ** — ಜಯವಾಗಲಿ ಮಹಾರಾಜರಿಗೆ.

**ದೊರೆ** — ಹೊಸ ಪರಿಯದಾಗಿ ತೋರುವುದು ನಿನ್ನೀ ಹರ್ಷ.
ಹೇಳು, ಸೋಜಿಗವೇತರಿಂದಾಯ್ತು ನಿನಗೆ ?

**ಭಟ** — ನಂಬುಗೆಗೆ ಮೀರಿರುವ ಮಿಗಿಲೊಸಗೆ ಬಂದಿಹುದು.
ಸೌಭದ್ರನಭಿಮನ್ಯು ಸಿಕ್ಕಿದನು ಸೆರೆಗೆ. || ೩೪ ||

**ಬೃಹನ್ನಳೆ** — ಏನು, ಸೆರೆಸಿಕ್ಕಿದನೆ ? (ತನ್ನಲ್ಲಿ ತಾನು)
ದಂಡಿನಳವಿನಿತೆಂದು ತೂಗಿರುವೆ ನಾನಿಂದು.
ಎಣಿಸಿರುವೆನಿಂದವನ ಕಂಡೆ ಕದನದಲಿ.
ಇಲ್ಲಿ ದಂಡಿನೊಳವನಿಗೆಣೆಯೊಬ್ಬನೂ ಇಲ್ಲ.
ಯಾವನಿರಬಹುದವನು, ಮಡಿಯೆ ಕೀಚಕರು ? || ೩೫ ||

**ಭಗವಾನ್** — ಬೃಹನ್ನಳೆ, ಏನಿದು ?

**ಬೃಹನ್ನಳೆ** — ಭಗವನ್,

---

* ಸಂಸ್ಕೃತ ನಾಟಕಗಳಲ್ಲಿ ಉತ್ತಮ ಪಾತ್ರಗಳು ಸಂಸ್ಕೃತವನ್ನೂ, ನೀಚ ಪಾತ್ರಗಳು ಪ್ರಾಕೃತವನ್ನೂ ಆಡುವುದು ವಾಡಿಕೆ. ಮೂಲದಲ್ಲಿ ಮೇಲಿನ ಮಾತು ಪ್ರಾಕೃತದಲ್ಲಿದೆ.

ಕಾಣೆ ನಾನವನ ಗೆಲ್ವವವನ.
ಶಿಕ್ಷಿತನು, ಬಲವಂತನವನು.
ತಂದೆಗಳ ದೌರ್ಭಾಗ್ಯದಿಂದ
ಪರಿಭವವ ಪಡೆದಿರುವನಹುದು. ‖ ೩೬ ‖

**ದೊರೆ**— ಈಗ ಹೇಗೆ ಸೆರೆ ಸಿಕ್ಕಿದನು ?

**ಭಟ**— ಅಳುಕದೆಯೆ ರಥವೇರಿ ತೋಳ್ಗಳಿಂದಿಳಿಸಿದನು.

**ದೊರೆ**— ಯಾರು ?

**ಭಟ**— ಒಡೆಯರಡಿಗೆಯ ಮನೆಯ ಬಾಣಸಿಗನವನು. ‖ ೩೭ ‖

**ಬೃಹನ್ನಳೆ**—(ಬೇರೆಯವರಿಗೆ ಕೇಳಿಸದಂತೆ) ಹೀಗೋ! ಆರ್ಯ ಭೀಮನ ಅಪ್ಪುಗೆಗೆ ಸಿಕ್ಕಿದನು , ಸೆರೆ ಸಿಕ್ಕಲಿಲ್ಲ.

ದೂರದಲಿ ನಿಂತು ಬರಿ ನೋಟದಲೆ ಸಂತೋಷಗೊಂಡೆ ನಾನು
ಮುನ್ನುಗ್ಗಿ ನೆರೆ ತಬ್ಬಿ ತಣಿಸಿದನು ಮಗನೊಲವ ಭೀಮ ತಾನು. ‖ ೩೮ ‖

**ದೊರೆ**— ಹಾಗಾದರೆ ಸತ್ಕಾರ ಮಾಡಿ ಅಭಿಮನ್ಯುವನ್ನು ಒಳಗೆ ಬರಮಾಡ ತಕ್ಕದ್ದು.

**ಭಗವಾನ್**— ಅಯ್ಯಾ ರಾಜ, ವೃಷ್ಣಿಪಾಂಡವರ ರಕ್ಷಣೆಯುಳ್ಳ ಅಭಿಮನ್ಯುವಿಗೆ ಹೆದರಿಕೊಂಡು ಸತ್ಕಾರಮಾಡಿದರೆಂದು ಜನ ತಿಳಿದುಕೊಳ್ಳುತ್ತಾರೆ. ಆದ್ದರಿಂದ ಇವನಿಗೆ ಅನಾದರಣೆಯೇ ನ್ಯಾಯವಾದ್ದು.

**ದೊರೆ**— ಅನಾದರಣೆಗೆ ತಕ್ಕವನಲ್ಲ ಯಾದವಿಯ ಮಗ. ಏಕೆಂದರೆ,

ಮಗನಿವ ಯುಧಿಷ್ಠಿರಗೆ. ವಯಸೊ ನಮ್ಮಣುಗಗೆಣೆ.
ಸಂಬಂಧ ದ್ರುಪದನೊಡನುಂಟು ಕುಲ ಮೊದಲಾಗಿ ;
ಅದರಿಂದ ನಮಗೆ ಮೊಮ್ಮಗನಿವನು. ಅಳಿಯತನ
ಬಳಿಯಲೇ ಬರಲಿಹುದು ; ಹೆಣ್ಣ ಹೆತ್ತವರಾವು.
ಸಿರಿಗೊಪ್ಪುವಂತೆಮ್ಮ ಪೂಜೆಗೊಳ್ಳಲು ತಕ್ಕನ್.
ಅತಿಥಿಯಿವನೆಮಗೆ, ಪಾಂಡವರಿಷ್ಟರು. ‖ ೩೯ ‖

**ಭಗವಾನ್** — ಹಾಗೋ ! ಸರಿ ಹೇಳಲೂ ಬೇಕು ; ಪರಿಹರಿಸಲೂ ಬೇಕು.

**ದೊರೆ** — ಇವನನ್ನು ಕರೆದುಕೊಂಡು ಬರತಕ್ಕವರು ಯಾರು ?

**ಭಗವಾನ್** — ಬೃಹನ್ನಳೆ ಕರೆತರಬೇಕು

**ದೊರೆ** — ಬೃಹನ್ನಳೇ, ಅಭಿಮನ್ಯುವನ್ನು ಒಳಗೆ ಬರಮಾಡು

**ಬೃಹನ್ನಳೆ** — ಮಹಾರಾಜರ ಅಪ್ಪಣೆಯ ಪ್ರಕಾರ (ತನ್ನಲ್ಲಿ ತಾನು) ಬಹಳ ಹೊತ್ತಿನಿಂದ ಬಯಸುತ್ತಿದ್ದ ಈ ಕಲಸ ನನಗೆ ದೊರಕಿತು.

(**ಹೋಗುತ್ತಾನೆ**)

**ಭಗವಾನ್** — (ತನ್ನಲ್ಲಿ ತಾನು)

ಇವನೀಗ ಕಣ್ತುಂಬ ನೋಡಲಾರೊಬ್ಬರೂ
ಇಲ್ಲದೆಡೆ ಕಂಡು ಬಿಗಿಯಪ್ಪಿಕೊಳಲಿ.
ತಡೆಯಿಲ್ಲದಾನಂದ ಬಾಷ್ಪಗಳ ನೆರೆ ಸುರಿಸ
ಲೆನ್ನೆದುರು ನಾಚುವನು ಮಗನಿಗಿವನು. ॥ ೪೦ ॥

**ದೊರೆ** — ನೋಡಿ, ಕುಮಾರನ ಕೆಲಸವನ್ನು !

ಭೀಷ್ಮ ಮೊದಲಾದರಸರೆಲ್ಲ ಮುರಿದಡಗಿದರು !
ಸೌಭದ್ರ ಸೆರೆ ಸಿಕ್ಕಿರುವನು !
ಫಲಿತಾರ್ಥವಿಂತಿದುತ್ತರನಿಂದು ಸರ್ವ ಭೂ
ಮಂಡಲವ ಗೆದ್ದ ಪೋಲಾಯ್ತು. ॥ ೪೧ ॥

(ಬಳಿಕ ಭೀಮಸೇನನು ಪ್ರವೇಶಿಸುತ್ತಾನೆ)

**ಭೀಮಸೇನ** — ಉರಿಯುತಿರಲರಗುಮನೆಯೆನ್ನ ತೋಳಸು ನೆಮ್ಮಿ
ದಮ್ಮನನು ಸೋದರರನೆತ್ತಿ ಹೊರತಂದೆನಂದು
ಇಂದು ಸೌಭದ್ರನೊಬ್ಬನನು, ಬಾಲನ, ತೇರಿ
ನಿಂದಿಳಿಸಿ ಮೊದಲಿನಾಯಾಸಕೆಣೆಯೆಂಬೆನಿದನು. ॥ ೪೨ ॥

**ಇತ್ತ ಬಾ, ಕುಮಾರ, ಇತ್ತ ಬಾ.**

(ಬಳಿಕ ಅಭಿಮನ್ಯುವೂ ಬೃಹನ್ನಳೆಯೂ ಪ್ರವೇಶಿಸುತ್ತಾರೆ)

**ಅಭಿಮನ್ಯು**— ಓಹೋ, ಯಾರಿವನು?

ಹರಡಿದೆದೆ, ತಿದ್ದಿರುವ ತೆಳುಹೊಟ್ಟೆ, ಸಣ್ಣ ನಡು,
ಉಬ್ಬಿ ಕೊಬ್ಬಿದ ಹೆಗಲು, ದೊಡ್ಡ ತೊಡೆ ತಳೆದವನು!
ಬರಿ ತೋಳ್ಗಳಿಂದೆನ್ನನೀ ಬಳಿಗೆ ತಂದಿಹನು!
ಬಲದಿ ಮಿಗಿಲಾದೊಡಂ ಪೀಡಿಸನು ನನ್ನನಿವನು! ॥ ೪೩ ॥

ಬೃಹನ್ನಳೆ— ಇತ್ತ ಬಾ, ಕುಮಾರ, ಇತ್ತ ಬಾ.

**ಅಭಿಮನ್ಯು**— ಓಹೋ, ಮತ್ತೊಬ್ಬ! ಇವನಾರು?

ಹೊಂದದೀ ಹೆಣ್ಣಲಂಕಾರಗಳ ತೊಟ್ಟು
ಪಿಡಿಯೊಡವೆಗಳ ತೊಟ್ಟ ಸಲಗನಂತಿಹನು
ವೇಷದಲಿ ಕೀಳು, ತೇಜದಲಿ ಬಲು ಮೇಲು
ಉಮೆಯ ವೇಷದ ಹರನೊ ಎನಲೆಸವನಿವನು. ॥ ೪೪ ॥

ಬೃಹನ್ನಳೆ— (ಬೇರೆಯವರಿಗೆ ಕೇಳದಂತೆ) ಅಣ್ಣಾ, ನೀನೇನು ಮಾಡಿಬಿಟ್ಟೆ ಇವನನ್ನಿಲ್ಲಿಗೆ ತಂದು?

ಮೊದಲ ರಣದಲೆ ಸೋತನೆಂದು ಕುಂದಾಯ್ತಿವಗೆ.
ಒಲವಿನಣುಗನನಗಲಿ ಮರುಗುವಳು ತಾನ್ ಸುಭದ್ರೆ.
ವಾಸುಭದ್ರನು ಕೆರಳುವನು ಸೋತನಿವನೆಂದು.
ಹಲವಾಡಲೇನು? ತೋಳ್ಬಲಕೆ ಕರೆಯಂಟಿತಿಂದು. ॥ ೪೫ ॥

ಭೀಮಸೇನ— ಅರ್ಜುನ,

ಬೃಹನ್ನಳೆ— ಹೌದು, ಹೌದು; ಅರ್ಜುನನ ಮಗ ಇವನು.

ಭೀಮಸೇನ— ಬಲ್ಲೆನೀ ದೋಷಗಳನಿವನ ತಂದುದರಲ್ಲಿ.
ಮಗು ಹಗೆಯ ಕೈಯೊಳಿರೆ ತಾಳುವನದಾರು?
ಮಕ್ಕಳೊಲ್ದವಳು, ನೆರೆ ಕೊರಗುವಾ ದ್ರೌಪದಿಯು
ನೋಡಲೆಂದಿವನ ಬೇಕೆಂದೆ ಕರೆತಂದೆ. ॥ ೪೬ ॥

**ಬೃಹನ್ನಳೆ**— (ಬೇರೆಯವರಿಗೆ ಕೇಳದಂತೆ) ಆರ್ಯ, ಮಾತನಾಡಿಸಬೇಕೆಂಬ ಕುತೂಹಲ ನನಗೆ ಬಹಳವಾಗಿದೆ. ಮಾತಾಡಿಸು ಇವನನ್ನು

**ಭೀಮಸೇನ**— ಆಗಲಿ. ಅಭಿಮನ್ಯೂ,

**ಅಭಿಮನ್ಯು**— ಏನು, ಅಭಿಮನ್ಯು !

**ಭೀಮಸೇನ**— ಇವನು ನನ್ನ ಮೇಲೆ ಕೆರಳುತ್ತಾನೆ. ನೀನೇ ಮಾತಾಡಿಸು.

**ಬೃಹನ್ನಳೆ**— ಅಭಿಮನ್ಯೂ,

**ಅಭಿಮನ್ಯು**— ಏನು, ಏನು ? ಅಭಿಮನ್ಯುವೋ, ನಾನು ? ಓಹೋ !

> ಕೀಳರೂ ಕ್ಷತ್ರಿಯರ ಹೆಸಗೊಂಡು ಕರೆಯುವರು!
> ಇಲ್ಲಿದೇ ನಡವಳಿಕೆ ! ಅವಮಾನ ಸಹಜ ಸೆರಗೆ ! || ೪೭ ||

**ಬೃಹನ್ನಳೆ**— ಅಭಿಮನ್ಯೂ, ಸುಖವಾಗಿರುವಳೇ ನಿಮ್ಮ ತಾಯಿ ?

**ಅಭಿಮನ್ಯು**— ಏನೇನು ? ನಮ್ಮಮ್ಮನೋ ?

> ಯಾರು ನೀನ್ ? ಧರ್ಮರಾಜನೊ ? ಭೀಮಸೇನನೊ ?
> ಮೇಣ್ ಧನಂಜಯನೇನು ? ತಂದೆಯಂತೊತ್ತೊತ್ತಿ
> ಹೆಂಗಸರ ಸುದ್ದಿಯನು ಕೇಳುತಿರುವೆ ! || ೪೮ ||

**ಬೃಹನ್ನಳೆ**— ಅಭಿಮನ್ಯೂ, ಕುಶಲವಾಗಿರುವನೇ, ದೇವಕೀ ಪುತ್ರ ಕೇಶವ ?

**ಅಭಿಮನ್ಯು**— ಓಹೋ ! ಆ ಪೂಜ್ಯನನ್ನೂ ಹೆಸರು ಹಿಡಿದೇ ಮಾತೋ ? ಹೌದು, ಹೌದು ; ಕುಶಲವಾಗಿದ್ದಾನೆ, ನಿಮ್ಮ ನೆಂಟ !

(ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾರೆ)

**ಅಭಿಮನ್ಯು**— ಏನಿದು, ನನ್ನನ್ನೀಗ ಹಾಸ್ಯಮಾಡಿ ನಗುತ್ತೀರಿ ?

**ಬೃಹನ್ನಳೆ**— ಏನೂ ಇಲ್ಲ.

> ನಿನಗೆ ಪಾರ್ಥನೆ ತಂದೆ ; ಮಾವನೋ ಶ್ರೀ ಕೃಷ್ಣ ;
> ತರುಣ ನೀನಸ್ತ್ರಗಳ ಬಲ್ಲವನು. (ಇಂತಿರಲು)
> ಯುದ್ಧದಲಿ ಸೋತುದಿದು ತಕ್ಕುದಾಯ್ತು ! || ೪೯ ||

**ಅಭಿಮನ್ಯು** — ಸಾಕು, ಬಾಯಿಗೆ ಬಂದಂತೆ ಹರಟಬೇಡಿ.

ಬೇಡ ಆತ್ಮಸ್ತೋತ್ರ ! ನಮ್ಮ ಕುಲಕಿದು ತಗದು
ನೋಡಿ ಸತ್ತರಲಂಬನಿರದಲ್ಲಿ ಬೇರೆ ಹೆಸರು. ॥ ೫೦ ॥

**ಬೃಹನ್ನಳೆ** — (ತನ್ನಲ್ಲಿ ತಾನು) ಸರಿಯಾಗಿ ಹೇಳಿದನು ಕುಮಾರ.

ತೇರ್ ಕುದುರೆ ಮದ್ದಾನೆ ಕಾಲಾಳ ಪಡೆಯೊಳಗೆ
ಬಿಲ್ಬಾಣನಂಬಿರಿಯದವನೊಬ್ಬನೂ ಇಲ್ಲ
ನಾನುಮವನೆಸುಗೆಯಲಿ ಗಾಯಗೊಳ್ಳುತಲಿದ್ದೆ
ನೊಡನೆ ಹಿಂದಿರುಗಿಸಪೆ ತೇರ ನಡಸಿರಲು ॥ ೫೧ ॥

(ಪ್ರಕಾಶವಾಗಿ) ಹೀಗೆಯೇ, ಮಾತಿನ ಪರಾಕ್ರಮ ! ಪದಾತಿಗೇಕೆ ಸೆರೆ ಸಿಕ್ಕಿದೆ ?

**ಅಭಿಮನ್ಯು** — ಶಸ್ತ್ರವಿಲ್ಲದನೆನ್ನ ಬಳಿ ಬಂಚನದರಿಂದ
ಸಿಕ್ಕಿಕೊಂಡೆನು. ಕೈದು ತೊರೆದವನಸಿರಿವನಾರ್
ಅರ್ಜುನನ, ಪಿತನ, ನೆನೆವವನು ? ॥ ೫೨ ॥

**ಭೀಮಸೇನ** — (ತನ್ನಲ್ಲಿ ತಾನು)

ಧನ್ಯನರ್ಜುನ ; ತಾನೆ ಕೇಳಿರುವನೆರಡನ್ .
ಮಗನ, ತಂದೆಯ, ಶ್ಲಾಘ್ಯ ರಣಪರಾಕ್ರಮವನ್ ॥ ೫೩ ॥

**ದೊರೆ** — ಬೇಗ, ಬೇಗ ಕರೆತನ್ನಿ ಅಭಿಮನ್ಯುವನ್ನು.

**ಬೃಹನ್ನಳೆ** — ಇತ್ತ ಬಾ, ಇತ್ತ ಬಾ, ಕುಮಾರ. ಇಗೋ ಮಹಾರಾಜ. ಕುಮಾರ, ಬಳಿಗೆ ಹೋಗು.

**ಅಭಿಮನ್ಯು** — ಆಃ ! ಯಾರಿಗೆ ಮಹಾರಾಜ ?

**ಬೃಹನ್ನಳೆ** — ಹಾಗಲ್ಲ, ಬಾರದು, ಬಾರದು. ಬ್ರಾಹ್ಮಣನ ಸಂಗಡ ಇದ್ದಾರೆ.

**ಅಭಿಮನ್ಯು** — ಬ್ರಾಹ್ಮಣನ ಸಂಗಡವೆ ? (ಹತ್ತಿರ ಹೋಗಿ) ಭಗವನ್, ವಂದಿಸುತ್ತೇನೆ.

**ಭಗವಾನ್** — ಬಾ, ಬಾ ಮಗು,

ಶೌರ್ಯ, ಧೃತಿ, ವಿನಯ, ತಮ್ಮವರಲ್ಲಿ ದಯೆ, ಇನಿಮೆ,
ಬಿಲ್ಗಲವು, ಮಿಗೆ ಪರಾಕ್ರಮ, ಇವೆಲ್ಲವನು—
ಒಬ್ಬ ತಂದೆಯೊಳಿರುವ ಗುಣಗಳನು— ಪಡೆ ನೀನು ;
ಉಳಿದ ನಾಲ್ವರೊಳಾವುದೊಪ್ಪುವುದೊ ಅದನು. ||೫೪||

ಅಭಿಮನ್ಯು — ಅನುಗೃಹೀತನಾದೆ

ದೊರೆ — ಬಾ, ಬಾ, ಮಗು ನನಗೇಕೆ ನಮಸ್ಕಾರ ಮಾಡುವುದಿಲ್ಲ? ಓಹೋ! ಸೊಕ್ಕಿರುವನಲ್ಲವೆ ಈ ಕ್ಷತ್ರಿಯ ಕುಮಾರ! ಇರಲಿ. ನಾನಿವನ ಸೊಕ್ಕು ಮುರಿಯುತ್ತೇನೆ ಯಾರು, ಇವನನ್ನು ಹಿಡಿದು ತಂದವನು?

ಭೀಮಸೇನ — ಮಹಾರಾಜ, ನಾನು

ಅಭಿಮನು — 'ಶಸ್ತ್ರವಿಲ್ಲದೆ' ಎಂದು ಹೇಳು.

ಭೀಮಸೇನ — ಬಿಟ್ಟಿತು, ಬಿಟ್ಟಿತು.

ತುಂಬು ಮೆಲ್ತೋಳ್ಗಳಿನಗೊಡಹುಟ್ಟಿರುವ ಕೈದು.
ಅವ ನೆಮ್ಮಿ ಕಾದುವೆನು ದುರ್ಬಲರು ಬಿಲ್ಪಿಡಿವರು ||೫೫||

ಅಭಿಮನ್ಯು — ಹಾಗೆನ್ನಬೇಡ ನೀನು

ತೋಳಾರಿಗಕ್ಷೋಹಿಣೀ ಬಲವೊ, ಮೇಣಾರ
ವಿಕ್ರಮಕೆ ನೆರವು ಬೇರೊಂದಿರದೊ, ಆ ನಮ್ಮ
ನಡುತಂದೆಯೋ ನೀನು? ಅವನಿಗಿದು ತಕ್ಕ ಮಾತು. ||೫೬||

ಭಗವಾನ್ — ಮಗು, ಯಾರವನು, ನಡುಕಲವನೆಂದರೆ?

ಅಭಿಮನ್ಯು — ಕೇಳಿ. ಅಥವಾ, ನಾವು ಬ್ರಾಹ್ಮಣರಿಗೆ ಎದುರಾಡತಕ್ಕವರಲ್ಲ. ಬೇರೆ ಯಾರಾದರೂ ಹೇಳುವುದು ಮೇಲು.

ದೊರೆ — ಆಗಲಿ, ಆಗಲಿ ನಾನು ಕೇಳುತ್ತೇನೆ ಮಗು, ಯಾರವನು, ನಡುಕಲವನೆಂದರೆ?

ಅಭಿಮನ್ಯು — ಕೇಳಿ,

ಹಿಡಿದು ತಬ್ಬುತ ಜರಾಸಂಧನಿಗೆ ತೋಳೆಂಬ
ಕೊರಳ ಜತ್ತಿಗೆ ಬಿಗಿದು ಕೊಂದು ಭೀಷಣಕರ್ಮ
ವೆಸಗಿ, ಕೃಷ್ಣನಿಗದರ ಬಾಧ್ಯತೆಯ ಕಳೆದನವನು. ॥ ೫೭ ॥

ದೊರೆ — ಕೋಪಿಸೆನು ನಿನ್ನ ಮೂದಲೆಗೆ.
ಕೋಪಿಸಲು ನೀನು, ನಲಿಯುವೆನು.
'ನಿಂತನೇತಕೆ? ನಡೆಯಲಿ'ನಲು
ಅಪರಾಧಿ ನಾನಾಗದಿಹೆನೆ? ॥ ೫೮ ॥

ಅಭಿಮನ್ಯು — ನನಗೆ ಅನುಗ್ರಹ ತೋರುವುದಾದರೆ,

ಕಾಲ್ಗಳಿಗೆ ಮಾಡುವುದು ನಿಗ್ರಹಕೆ ತಕ್ಕ ಉಪ
ಚಾರವನು. ತೋಳ್ಗಳಿಂ ತಂದೆನ್ನನಾ ಭೀಮ
ತೋಳ್ಗಳಿಂದಲೆ ಬಿಡಿಸಿ ಕರೆದುಯ್ವನು. ॥ ೫೯ ॥

(ಬಳಿಕ ಉತ್ತರನು ಪ್ರವೇಶಿಸುತ್ತಾನೆ)

ಉತ್ತರ — ಹುಸಿಯ ಹೊಗಳಿಕೆಯೆಂಬುದತಿ ಕಷ್ಟ (ಲೋಕದಲಿ)
ಹುಸಿಯ ನುಡಿಗಳನೊಲಿದ ಜನರಾಡುತಿರಲು.
ಕದನವನು ಕುರಿತು ನಲವಾಡುತಿರಲೆನ್ನೊಡನೆ
ಮಾತಿನಲದೊಪ್ಪುವೆನು, ಮನದೆ ನಾಚುವೆನು. ॥ ೬೦ ॥

(ಬಳಿಗೆ ಹೋಗಿ) ಭಗವನ್, ವಂದಿಸುತ್ತೇನೆ.

ಭಗವಾನ್ — ಸ್ವಸ್ತಿ.

ಉತ್ತರ — ಅಪ್ಪ, ನಮಸ್ಕರಿಸುತ್ತೇನೆ

ದೊರೆ — ಬಾ, ಬಾ, ಮಗು. ಆಯುಷ್ಮಂತನಾಗು. ಮಗು, ಸಾಹಸ ತೋರಿಸಿದ ವೀರಪುರುಷರನ್ನು ಮನ್ನಿಸಿದೆಯ?

ಉತ್ತರ — ಮನ್ನಿಸಿ ಆಯಿತು. ಪೂಜ್ಯತಮನಾದವನಿಗೆ ತಾವೇ ಪೂಜೆ ಮಾಡಬೇಕು

ದೊರೆ — ಮಗು, ಯಾರಿಗೆ?

**ಉತ್ತರ**— ಇಗೋ, ಈ ಪೂಜ್ಯ ಧನಂಜಯನಿಗೆ

**ದೊರೆ**— ಏನು ಧನಂಜಯನಿಗೆ !

**ಉತ್ತರ**— ಸಂದೇಹವೇನು ? ಈ ಪೂಜ್ಯನು,

ಮಸಣದಲಿ ಬಿಲ್ಲನಕ್ಷಯಬಾಣವನು ಕರೆವ
ಬತ್ತಳಿಕೆಯೆರಡ ಕೊಂಡು
ಭೀಷ್ಮಾದಿ ರಾಜರೆಲ್ಲರನು ಮುರಿದೋಡಿಸಿದ
ನೆಮ್ಮ ಸಂರಕ್ಷಿಸಿದನು ||೬೧ ||

**ದೊರೆ**— ಹೀಗೊ !

**ಬೃಹನ್ನಳೆ**—ಪ್ರಸನ್ನರಾಗಬೇಕು, ಮಹಾರಾಜರು ಪ್ರಸನ್ನರಾಗಬೇಕು.

ಹುಡುಗತನದಿಂದ ಮೈಮರೆತು ತಾನಿರಿದೊಡಂ ತಿಳಿಯನಿವನು.
ಆ ಸಾಹಸವನೆಲ್ಲ ತಾನೆಸಗಿ, ಬೇರೊಬ್ಬರದು ಎಂಬನು ||೬೨||

**ಉತ್ತರ**— ತಾವು ಸಂಶಯಪಡಬೇಕಾದ್ದಿಲ್ಲ. ಇದೇ ಹೇಳುತ್ತದೆ,

ಗಾಂಡೀವ ಧನುವ ಹೆದೆ ತಾಕಿ ಮಣಿಕಟ್ಟನೆಡೆ
ಮೂಡಿದೀ ಕಲೆಗೆ
ಹನ್ನೆರಡು ವರ್ಷಗಳು ಸಂದರೂ ಮೊದಲಿನಾ
ಮೈಬಣ್ಣ ಬರದು. ||೬೩ ||

**ಬೃಹನ್ನಳೆ**— ಇದು ನನ್ನ ಕೈಬಳೆಗಳಾಡಿ ಮೂಡಿರುವ ಕಲೆ.
ಬಣ್ಣಗೆಟ್ಟೊತ್ತೊತ್ತಿ, ಬಂತು ಕೈಗಾಪಿನೆಡೆಗೆ. ||೬೪ ||

**ದೊರೆ** — ಎಲ್ಲಿ, ನೋಡೋಣ.

**ಬೃಹನ್ನಳೆ**— ರುದ್ರನಂಬಿರಿದ ಮೈಯಜುರ್ನನನು ಭಾರತನು ನಾನಾಗಲು,
ಸ್ಪಷ್ಟವೀತನೆ ಭೀಮನೇನನೀತನೆ ಯುಧಿಷ್ಠಿರ ರಾಜನು. ||೬೫||

**ದೊರೆ**— ಅಯ್ಯೊ ಧರ್ಮರಾಜ, ವೃಕೋದರ, ಧನಂಜಯ ! ಅದೇಕೆ ನನ್ನನ್ನು ನಂಬಲಿಲ್ಲ? ಇರಲಿ, ಇರಲಿ, ಕಾಲ ಬಂದಾಗ (ಆ ಮಾತು). ಬೃಹನ್ನಳೇ, ಹೋಗು ಅಂತಃಪುರಕ್ಕೆ.

ಬೃಹನ್ನಳೆ — ಮಹಾರಾಜರ ಅಪ್ಪಣೆಯ ಪ್ರಕಾರ.

ಭಗವಾನ್ — ಅರ್ಜುನ, ಬೇಡ, ಒಳಗೆ ಹೋಗಬೇಡ ಮುಗಿಯಿತು ನಮ್ಮ ಪ್ರತಿಜ್ಞೆ.

ಅರ್ಜುನ — ಆರ್ಯನ ಅಪ್ಪಣೆಯ ಪ್ರಕಾರ

ದೊರೆ — ಶೂರರಾ ಸತ್ಯಸಂಧರ ಪುಣ್ಯ ಕಾರ್‍ಯದವರ
ಪಾಂಡವರ ವಾಸದಿಂದೆನ್ನ ಕುಲ ವಿಮಲವಾಯ್ತು. ॥ ೬೬ ॥

ಅಭಿಮನ್ಯು — ಇವರು ಪೂಜ್ಯರಾದ ನಮ್ಮ ತಂದೆಗಳು! ಅದರಿಂದಲೇ

ಕೋಪಿಸರು, ನಾನು ಮೂದಲಿಸೆ ನಗುನಗುತೆನ್ನ
ಮೂದಲಿಸುವರು. ಮಿಗಿಲು ಶುಭದಲ್ಲಿ ಕೊನೆಯಾಯ್ತು
ಗೋಗ್ರಹಣವಿದರಿಂದ ತಂದೆಗಳ ಕಂಡೆನಿಂದು. ॥ ೬೭ ॥

(ಭೀಮಸೇನನನ್ನು ಕುರಿತು) ಅಪ್ಪಾ,

ತಿಳಿಯದೆಯೆ ಮೊದಲು ನಾ ನಿಮಗೆ ವಂದಿಸಲಿಲ್ಲ.
ಎಳೆಯನಾ ತಪ್ಪಿತವ ಮನ್ನಿಪುದು ಕರುಣೆದೋರಿ. ॥ ೬೮ ॥

ಭೀಮಸೇನ — ಬಾ, ಬಾ, ಮಗು. ತಂದೆಗೆ ಸಮಾನವಾದ ಪರಾಕ್ರಮವುಳ್ಳವನಾಗು.

ಅಭಿಮನ್ಯು — ಅನುಗ್ರಹವಾಯಿತು.

ಭೀಮಸೇನ — ಮಗು, ತಂದೆಗೆ ನಮಸ್ಕಾರ ಮಾಡು.

ಅಭಿಮನ್ಯು — ಅಪ್ಪಾ, ನಮಸ್ಕರಿಸುತ್ತೇನೆ.

ಅರ್ಜುನ — ಬಾ, ಬಾ, ಮಗು (ಅಪ್ಪಿಕೊಂಡು)

ಎದೆಯ ತಣಿಸುವ ಮಗನ ಮೈಯಿನಪ್ಪುಗೆ ದೂರ ನಡೆದು,
ಹದಿಮೂರು ವರ್ಷಗಳ ಕೊನೆಗೆ ದೊರೆತಿಹುದೆನಗೆ ಮಗುಳೆ. ॥ ೬೯ ॥

ಮಗು, ವಂದನೆ ಮಾಡು, ವಿರಾಟೇಶ್ವರನಿಗೆ.

**ಅಭಿಮನ್ಯು** — ವಂದಿಸುತ್ತೇನೆ

**ದೊರೆ** — ಬಾ, ಬಾ, ಮಗು!

ಧರ್ಮರಾಜನ ಪರಮ ಧೈರ್ಯವನು ಪಡೆ ನೀನು,
ಭೀಮಸೇನನ ಬಲವನರ್ಜುನನ ನಿಪುಣತೆಯನು,
ಮಾದ್ರೀಸುತರ ಕಾಂತಿಸೌಂದರ್ಯಗಳ, ಜಗತ್-
ಪ್ರಿಯನ ಶ್ರೀ ಕೃಷ್ಣನಾ ಪ್ರಖ್ಯಾತಿಯನ್. ॥ ೭೦ ॥

(ತನ್ನಲ್ಲೇ) (ಅರ್ಜುನನಿಗಿರುವ) ಉತ್ತರೆಯ ಸಮೀಪ ಪರಿಚಯ ವೊಂದು ನನ್ನನ್ನು ಬಾಧಿಸುತ್ತಿದೆ. ಈಗೇನು ಮಾಡಲಿ? ಸರಿ, ತಿಳಿಯಿತು. ಯಾರಲ್ಲಿ?

(ಪ್ರವೇಶಿಸಿ)

**ಭಟ** — ಜಯವಾಗಲಿ ಮಹಾರಾಜರಿಗೆ

**ದೊರೆ** — ಸ್ವಲ್ಪ ನೀರು

**ಭಟ** — ಮಹಾರಾಜರ ಅಪ್ಪಣೆಯ ಪ್ರಕಾರ. (ಹೋಗಿ ಬಂದು) ಇಗೋ ನೀರು.

**ದೊರೆ** — (ತೆಗೆದುಕೊಂಡು) ಅರ್ಜುನಾ, ಗೋಗ್ರಹಣವನ್ನು ಗೆದ್ದದ್ದಕ್ಕೆ ಬಹುಮಾನವಾಗಿ ಉತ್ತರೆಯನ್ನು ಸ್ವೀಕರಿಸಬೇಕು.

**ಯುಧಿಷ್ಠಿರ** — ಈ ತಲೆ ತಗ್ಗಿತು.

**ಅರ್ಜುನ** — (ತನ್ನಲ್ಲಿ ತಾನು) ನನ್ನ ನಡತೆಯನ್ನು ಹೇಗೆ ತೂಗುತ್ತಿದ್ದಾನೆ! (ಪ್ರಕಾಶವಾಗಿ) ಅಯ್ಯಾ ರಾಜ,

ನಿಮ್ಮೊಲವಿನಂತವುರದವರನೆಲ್ಲರನೆಮ,
ತಾಯಂತೆ ಮನ್ನಿಸಿದೆನು.
ನೀವಿತ್ತ ಮಗಳನೀ ಉತ್ತರೆಯ ಕೈಕೊಳ್ಳೆ
ಸಾದರದಿ ಮಗನಿಗಾಗಿ. ॥ ೭೧ ॥

ಯುಧಿಷ್ಠಿರ — ಈಗ ತಲೆ ಎತ್ತುವಂತಾಯಿತು.

ದೊರೆ — ಯುದ್ಧಶೂರರ ಸಚ್ಚರಿತ್ರೆಯಲಿ ನೆಲೆಗೊಂಡು ನಿಂತನಿವನು ;
ಈಗಳಂತಃಪುರದ ವಾಸಕೊಪ್ಪುವ ಕಾರ್ಯವೆಸಗಿರುವನು. ||೭೨||

ಇವತ್ತೇ ಒಳ್ಳೆಯ ನಕ್ಷತ್ರವಲ್ಲವೆ! ಇವತ್ತೇ ಇವನಿಗೆ ಮದುವೆ ನಡೆಯಲಿ.

ಯುಧಿಷ್ಠಿರ — ಆಗಬಹುದು, ಆಗಬಹುದು. ಅರ್ಜುನ ಬಳಿಗೆ ಉತ್ತರನನ್ನು ಕಳುಹಿಸೋಣ.

ದೊರೆ — ನಿಮ್ಮ ಇಷ್ಟ ಹೇಗೋ ಹಾಗೆ. ಧರ್ಮರಾಜ, ವೃಕೋದರ, ಧನಂಜಯ! ಇತ್ತ ಬನ್ನಿ, ಇತ್ತ ಬನ್ನಿ. ಈ ಸಂತೋಷದಲ್ಲಿಯೇ ಅಂತಃಪುರಕ್ಕೆ ಹೋಗೋಣ.

ಎಲ್ಲರೂ — ಆಗಬಹುದು.

(ಎಲ್ಲರೂ ಹೋಗುತ್ತಾರೆ)

**ಎರಡನೆಯ ಅಂಕ ಮುಗಿಯಿತು.**



## ಮೂರನೆಯ ಅಂಕ

( ಬಳಿಕ ಸೂತನು ಪ್ರವೇಶಿಸುತ್ತಾನೆ )

**ಸೂತ**— ಹೋ, ಹೋ! ಹೇಳಿ, ಹೇಳಿ, ಸರ್ವಕ್ಷತ್ರಾಚಾರ್ಯರನ್ನು ಮುಂದುಮಾಡಿಕೊಂಡಿರುವ ಕ್ಷತ್ರಿಯರಿಗೆ,

"ನಾರಾಯಣನ ಚಕ್ರದುರುಭಯವ ಕಡೆಗಣಿಸಿ,
ಚಿರಕಾಲ ಮರೆಯಾದ ಪಾಂಡವರ ಪರಿಭವಿಸಿ,
ಹಿಡಿದರಭಿಮನ್ಯುವನು. ಬಿಲ್ವಿಡಿದ ಕೌರವರು
ಕಾಯ್ದುಕೊಳಲಿಲ್ಲವನ ತಗ್ಗಿಸಿರಿ ತಲೆಯ" ॥ ೧ ॥

ಎಂದು.

( ಬಳಿಕ ಭೀಷ್ಮ ದ್ರೋಣರು ಪ್ರವೇಶಿಸುತ್ತಾರೆ )

**ದ್ರೋಣ**— ಸೂತ, ಹೇಳು, ಹೇಳು.

ರಣಪಟುವನೆನ್ನ ಶಿಷ್ಯನ ಸುತನ ಹಿಡಿದುಕೊಂಡುಯ್ದವನದಾರು?
ಯಾವನಿಹನಿಲ್ಲಿನ್ನ ದಿವ್ಯಾಸ್ತ್ರಗಳ ಕೂಡೆ ಸೆಣಸಲೆಳಸುವನು ?
ಹೇಳು ಹೇಳಾ ಗಂಡುಗಲಿ ಯಾವನಸ್ತ್ರವೇನವನ ಬಲವೇನು ?
ಆ ಬಳಿಗೆ ಕಳುಹುವೆನು ಬಲಶಾಲಿಗಳನು ನನ್ನಂಬು ದೂತರನು ॥೨॥

**ಭೀಷ್ಮ**— ಸೂತ, ಹೇಳು, ಹೇಳು

ಮುರಿದೋಡುವಲ್ಲಿ ತಿಳಿವಿಲ್ಲದಾ ದೋಷವಿರೆ
ತಾರುಣ್ಯಭಾವದಲಿ ತಡಮಾಡುತಿರುವ
ಮರಿಯಾನೆಯನು ಹಿಂಡು ಮುರಿದೋಡಿದಾ ಬಳಿಕ
ಹಿಡಿದವನದಾರಾನೆ ಹಿಡಿಯ ಬಂದವನು? ॥ ೩ ॥

( ಬಳಿಕ ದುರ್ಯೋಧನ, ಕರ್ಣ ಮತ್ತು ಶಕುನಿ ಪ್ರವೇಶಿಸುತ್ತಾರೆ )

**ದುರ್ಯೋಧನ**— ಸೂತ, ಹೇಳು, ಹೇಳು. ಯಾರು ಹಿಡಿದೊಯ್ದರು

ಅಭಿಮನ್ಯುವನ್ನು? ನಾನೇ ಅವನನ್ನು ಬಿಡಿಸಿಕೊಂಡು ಬರುತ್ತೇನೆ. ಏಕೆಂದರೆ,

ನನಗಿವನ ತಂದೆಗಳಿಗುದಿಸಿಹುದು ದಾಯಾದಿ ಭೇದ.
ಆದರಿಸಿದಕೆನ್ನಮೇಲ್ತಪ್ಪು ಹೊರಿಸುವರಾಡುವವರು.
ಅಲ್ಲದೆನಗಿವನು ಮಗನಹನು ಪಾಂಡವರಿಗಾ ಬಳಿಕ.
ಕಲಹವಿರೆ ಮನೆಯೊಳಗೆ ಮಕ್ಕಳಲಿ ತಪ್ಪಿನಿತುಮಿರದು. ||೪||

**ಕರ್ಣ** — ಬಹು ಪ್ರೀತಿಯಿಂದಲೂ ಅನುರೂಪವಾಗಿಯೂ ಮಾತಾಡಿದೆ. **ಗಾಂಧಾರೀ ಪುತ್ರ,**

ಬೇಡವೈ ಸ್ವಜನಭಯದಿಂದ, ಮೇಣೆಳೆಯತನ
ವೆಂಬೆಣಿಕೆಯಿಂದ ಆಪತ್ತಿಗೊಳಗಾದನವ
ನಿನ್ನ ಹಿತಕಾಗಿ ಕಾಳಗದ ಮುಮ್ಮೊನೆಯಲ್ಲಿ
ನಾವಿಂದು ಕಾಯ್ದುಕೊಳಲಿಲ್ಲವಭಿಮನ್ಯುವನು.
ಹಿಡಿಯುವುದು ಬಲ್ತೊರೆದು ನಾರುಡೆಯನೆಲ್ಲ. ||೫||

**ಶಕುನಿ** — ಹಲವರಿದ್ದಾರೆ ನಾಥರು ಅಭಿಮನ್ಯುವಿಗೆ. ಬಿಡುಗಡೆ ಹೊಂದಿದ ನೆಂದೇ ತಿಳಿದುಕೊಳ್ಳಿ ಏಕೆಂದರೆ,

ಬಿಡುವನಿವನರ್ಜುನನ ಮಗನೆಂದು ತಿಳಿಯಲಾ
ದೊರೆ ವಿರಾಟನು ತಾನೆ. ಕಾಳಗದ ಕಳದಲ್ಲಿ
ಗೆದ್ದವನ ಬಿಡುವನಾ ದಾಮೋದರನ ನೆನೆದು.
ಅಲ್ಲದಿರೆ ಕೆರಳುಕ್ಕಿ ನೇಗಿಲನು ತೂಗುತ್ತ
ಬರುವಾ ಪ್ರಲಂಬವೈರಿಗೆ ಹೆದರಿ ಬಿಡಿಸುವನು.
ಮೇಣ್ ಮಹಾಬಲಶಾಲಿ ಭೀಮನರಿಗಳನೆಲ್ಲ
ಸದೆಬಡಿದು ತಾನಿವನ ಕರೆತರುವನಿಲ್ಲಿ. ||೬||

**ದ್ರೋಣ** — ಸೂತ, ಹೇಳು, ಹೇಳು. ಅದು ಹೇಗೆ ಸೆರೆಸಿಕ್ಕಿದನು?

ಅವನ ತೇರ್ ಕುಸಿಯಿತೋ? ಕುದುರೆಗಳು ಬೆದರಿದುವೊ ?
ನೆಲ ಗಾಲಿಗಳ ತಾಳದಂತಾಯ್ತೊ? ಕಣೆ ಮುಗಿದು
ಬತ್ತಳಿಕೆ ಬರಿದಾಯ್ತೊ ? ಎಚ್ಚರಿಕೆ ತಪ್ಪಿದೆಯೊ?
ನಾರಿ ಹರಿಯಲು ಬಿಲ್ಲು ಫಲವಿಲ್ಲವಾಯ್ತೊ ?
ಇವು ದೈವಯೋಗದಲಿ ತೇರ್‌ವೀರರಿಗೆ ಬರುವ
ಕಾಳಗದ ಕೇಡುಗಳು ಕೈವಿಡಿದ ಬಾಣವನೆ
ಹಿಡಿದೆಳೆದು ಸೆಳೆಯುವರು ಹಗೆಗಳವನಾದರೋ
ಶಿಕ್ಷೆಯಲಿ ನುರಿತವನು ; ಮರೆಯದವನು. || ೭ ||

ಸೂತ — ಆಯುಷ್ಮನ್, (ಅವನು) ವೈವೆತ್ತ ಧನುರ್ವೇದ. ಆಯುಷ್ಮಂತನಿಗೆ ತಿಳಿಯದೇನು?

ನೀನೊರೆದ ದೋಷಗಳವೊಂದಿನಿತುಮಿರದೊಡಂ,
ಆ ಮಹಾರಥ ಬಾಣಮಯವಾಗಿ ನಿಂದೊಡಂ,
ತಿರುಗುವುರಿಗೊಳ್ಳಿಯನು ಹೋಲುವೆನ್ನಾ ತೇರ
ತುಡುಕಿದನದೊರ್ವ ಕಾಲಾಳಿರಗಿ ಬಂದು. || ೮ ||

ಎಲ್ಲರೂ — ಏನು, ಕಾಲಾಳೇ ?

ದ್ರೋಣ — ಅದೆಂಥವನು ಆ ಕಾಲಾಳು ?

ಸೂತ — ಏನನ್ನು ಹೇಳಲಿ, ರೂಪವನ್ನೊ ಪರಾಕ್ರಮವನ್ನೊ?

ಭೀಷ್ಮ — ರೂಪದಿಂದ ಹೆಂಗಸರನ್ನು ವರ್ಣಿಸುತ್ತಾರೆ. ಪರಾಕ್ರಮದಿಂದ ಗಂಡಸರನ್ನು (ವರ್ಣಿಸುತ್ತಾರೆ). ಆದ್ದರಿಂದ ಅವನ ಪರಾಕ್ರಮವನ್ನೇ ವಿವರಿಸು

ಸೂತ — ಆಯುಷ್ಮನ್,

ದುರ್ಯೋಧನ - ಏಕೆ ಹೊಗಳುವೆ ನೀನದಾವನನೊ ಹೆಮ್ಮೆನುಡಿಯಿಂದ?
ಹೇಳು. ದಿಗಿಲಿಲ್ಲೆನಗೆ, ವೇಗದಲಿ ವಾಯುವಾಗಿರಲುಂ.||೯||

ಸೂತ — ಲಾಲಿಸಬೇಕು ಮಹಾರಾಜರು. ಅವನು

ಹಾರಿ ಬೇಗನೆ ಕುದುರೆಗಳಮೇಲೆ ತೇರಚ್ಚಿನಲಿ ಕೈಯನಿಡಲು,
ಕುದುರೆಗಳು ಕೊರಳ ಮುಂಚಾಚುತಿನಿತಲುಗದೆಯೆ ನಿಂದು ದಾತೇರು.

ಭೀಷ್ಮ— ಹಾಗಾದರೆ ಇಟ್ಟುಬಿಡಿ ಆಯುಧಗಳನ್ನು.

ಎಲ್ಲರೂ — ಏಕೆ?

ಭೀಷ್ಮ— ನಡೆಗೆಟ್ಟು ನಿಂದಿರಲು ತೇರು ತೋಳಿಂದ
ಭೀಮನಂಕಕೆ ಸಂದನೆಂದರಿಯಿರವನು.
ಹಿಂದೆ, ದ್ರುಪದನ ಮಗಳ ಹರಣಗೈದಂದು
ಸೋಲಿಸಿದನವನೆ ಕಾಲಾಳ್ ಜಯದ್ರಥನ. ॥೧೧॥

ದ್ರೋಣ — ಸರಿಯಾಗಿ ಹೇಳಿದನು ಗಾಂಗೇಯ ಬಾಲ್ಯದಲ್ಲಿ ಉಪದೇಶ ಮಾಡಿದಾಗಿನಿಂದಲೂ ನಾನು ಅವನ ವೇಗವನ್ನು ಬಲ್ಲೆ. ಅಂಬೆಸುಗೆಯ ಮನೆಯಲ್ಲಿ,

ಕಿವಿವರೆಗೆ ಸೆಳೆದಂಬನವನೆಸೆಯೆ ಕಂಡು
'ನಿನ್ನ ತಲೆಯಲುಗಿತೆಂ'ದಾಡಿದೆನು ನಾನು.
ಆಗಳವನೋಡಿ ತಾನಂಬಿಗೆಣೆಯಾಗಿ
ಹಿಡಿದುಕೊಂಡನು ಗುರಿಯ ಮುಟ್ಟದಾ ಕಣೆಯನ್. ॥೧೨॥

ಶಕುನಿ — ಓಹೋ! ನಗು ಬರಿಸುವಂತಿದೆ ಈ ಮಾತು! ಸ್ವಾಮಿ, ಒಂದು ಮಾತು ಕೇಳುತ್ತೇನೆ ತಮ್ಮನ್ನು.

ಇಲ್ಲ ಬೇರೊಬ್ಬ ಬಲವಂತನೀ ಲೋಕದಲಿ!
ಎಲ್ಲವನು ಹೇಳುವಿರಿ ಬೇಕಾದವರಲಿ.
ಲೋಕದೊಳಗೆಲ್ಲೆಲ್ಲು ಪಾಂಡವರೆ ಹರಿಡಿಕೊಂ
ಡಿರುವಂತೆ ನಿಮಗೆಲ್ಲ ಕಾಣುತಿಹುದೇನು? ॥೧೩॥

ಭೀಷ್ಮ— ಗಾಂಧಾರರಾಜ, ಎಲ್ಲವನ್ನೂ ಊಹೆಯಿಂದ ಹೇಳುತ್ತಿದ್ದೇವೆ.

ನಾವೆಲ್ಲ ನಡೆಯುವೆವು ಕಾಳಗಕೆ ತೇರೇರಿ
ಬಿಲ್ಲುಗಳ ಶಸ್ತ್ರಗಳ ಕೈಕೊಂಡು ನೆಮ್ಮಿ.
ಇಬ್ಬರೇ ತೊಳ್ಬಲವ ಸರೆ ನಂಬಿ ಕಳಕಿಳಿವರ್:
ಆ ಹಲಾಯುಧನೊಬ್ಬ, ಭೀಮನೊಬ್ಬ. ॥೧೪॥

**ಶಕುನಿ —** ತಟ್ಟನೆಯೆ ಮೇಲೆರಗಿ, ಸಾಹಸವನೊಡ್ಡಿಮ್ಮ
ನೊಬ್ಬನೇ ಮುರಿದನಲ್ತೆ,
ಅವನನಾ ಉತ್ತರನ 'ನಿವನೆ ಫಲ್ಗುನನಹುದು'
ಎಂದು ಕೆಲರಾಡುತಿಹರು! ॥೧೫॥

**ದ್ರೋಣ —** ಅಯ್ಯಾ ಗಾಂಧಾರರಾಜ, ಇಲ್ಲಿಯೂ ನಿನಗೆ ಸಂದೇಹವೆ?

ಉತ್ತರನುಮೆಳೆಯುವನೆ ಕಳದೊಳಗೆ ಬರಸಿಡಿಲಿ
ನಬ್ಬರದ ಮೊಳಗ ತಾನುಗುಳುವಾ ಬಿಲ್ಲನ್?
ಉತ್ತರನ ಕಣೆಗಳುಂ ಬಿಸಿಲುಡುಗಿ ಸೂರ್ಯನೊಂ
ದರೆಗಳಿಗೆ ಮುಳುಗುವಂತೆಸಗುವುವೆ ನೋಡಲ್? ॥೧೬॥

**ಭೀಷ್ಮ—** ಗಾಂಧಾರೀ ಪುತ್ರ, ಸ್ಪಷ್ಟವಾಗಿಯೇ ಇದೆಯಲ್ಲ. ನಿನಗೆ ತಿಳಿಯಲಿಲ್ಲವೆ?

ನಾರಿನಾಲಗೆಯಿಂದ ಹೊರಳಿ ನೆಗೆದಂಬುಗರಿ
ಯಕ್ಷರದ ನುಡಿಗಳಿಂದ
ಎಳೆದು ನುಡಿಸಿದನಲ್ತೆ ಪಾರ್ಥನಾ ನುಡಿಗಳಿಗೆ
ಕಿವಿಗುಡದೆ ಹೋದೆ ನೀನು ॥೧೭॥

(ಪ್ರವೇಶಿಸಿ)

**ಸೂತ —** ಜಯವಾಗಲಿ ಆಯುಷ್ಮಂತನಿಗೆ. ಶಾಂತಿಕರ್ಮ ನಡಸಬೇಕು.

**ಭೀಷ್ಮ—** ಏಕೆ?

ಸೂತ— ಧ್ವಜಕಂಬು ನಾಟಿರಲು ಶಾಂತಿ ಮಾಡಲ್ಕತಕ್ಕು
ದಿಡೆ ಬಾಣವಾರದೋ ಹೆಸರಿಹುದು ಗರಿಯೆಡೆಯೊಳು.॥೧೮॥

ಭೀಷ್ಮ— ತಾ ಇಲ್ಲಿ

(ಸೂತ ಹತ್ತಿರ ತರುತ್ತಾನ)

ಭೀಷ್ಮ—(ತೆಗದುಕೊಂಡು ನೋಡಿ) ಮಗು, ಗಾಂಧಾರರಾಜ, ಮುಪ್ಪಿನಿಂದ ಮಂಕಾಗಿ ಹೋಗಿದೆ ನನ್ನ ಕಣ್ಣು ಓದು, ಈ ಬಾಣವನ್ನು

ಶಕುನಿ—(ತೆಗೆದುಕೊಂಡು ಓದಿ ನೋಡಿ) ಅರ್ಜುನನದು (ಎಂದು ಎಸೆಯುತ್ತಾನೆ. ಅದು ದ್ರೋಣನ ಅಡಿಗಳಲ್ಲಿ ಬೀಳುತ್ತದ)

ದ್ರೋಣ—(ಅಂಬನ್ನು ತಗೆದುಕೊಂಡು) ಬಾ, ಬಾ, ಮಗು

ಇದು ನನ್ನ ಶಿಷ್ಯನೆಚ್ಚಂಬು ಗಾಂಗೇಯನನು ವಂದಿಸಲ್ಕೆಂದು
ಅಡಿಗಳಲಿ ಬಿದ್ದಿದಿಹುದು ನಲದ ಕ್ರಮದಿಂದೆನ್ನ ವಂದಿಸಲ್ಕೆಂದು.॥೧೯॥

ಶಕುನಿ— ಬೇಡಿ ಸ್ವಾಮಿ, ಅಂಬಿನ ನಂಬಿಕೆಯನ್ನು ಈಗ ನೆಚ್ಚಿಕೊಳ್ಳ ಬೇಡಿ

ಬಂಟನರ್ಜುನನೆಂಬನಿರಬಹುದು ಬಾಣವಿದು
ಅವನೆಚ್ಚು ಬಂದುದಿರಬಹುದು
ಉತ್ತರನೆ ಮೋಣ್ ಬರೆದುದಿರಬಹುದು ಇವರ ನಿಜ
ವೇನೆಂದು ಬೆಳಗಿ ಹೊರಬರಲಿ ॥೨೦॥

ದುರ್ಯೋಧನ—ನಾಡನವರಿಗೆ ಕೊಡಿಸಲೆಳಸಿ ಹುಸಿನುಡಿಯುವೊಡೆ,
ಕೊಡುವೆ ನಾಡರ್ಧವ ಯುಧಿಷ್ಠಿರನ ಕಾಣಲೊಡನೆ. ॥೨೧॥

(ಪ್ರವೇಶಿಸಿ)

ಭಟ— ಜಯವಾಗಲಿ ಮಹಾರಾಜರಿಗೆ! ವಿರಾಟನಗರದಿಂದ ದೂತ ಬಂದಿದ್ದಾನೆ.

ದುರ್ಯೋಧನ— ಒಳಗೆ ಬರಮಾಡು

ಭಟ— ಮಹಾರಾಜರ ಅಪ್ಪಣೆಯ ಪ್ರಕಾರ. (ಹೋಗುತ್ತಾನೆ)

(ಬಳಿಕ ಉತ್ತರ ಪ್ರವೇಶಿಸುತ್ತಾನೆ)

ಉತ್ತರ— ದಾರಿ ಕುರಿದಾದೊಡಂ, ಕುದುರಗಳ ವೇಗ ಹಿರಿ
ದಾದೊಡಂ, ತೇರ್ ತಡೆದು, ಬರುವುದಾನ್ ತಡವಾಯ್ತು
ಪಾರ್ಥನಂಬಿಂದೊರಗಿದಾನೆಯುಲ್ಲಿಡೆ ಕೆಡೆದು
ಕುದುರ ನಡೆಯುವುವು ಕಷ್ಟದಲಿ, ನಲ ವಿಷಮವಾಯ್ತು. ||೨೨||

(ಒಳಹೊಕ್ಕು ಕೈಮುಗಿದು) ಭೋ, ಭೋ, ಆಚಾರ್ಯ ಪಿತಾಮಹ ಮೊದಲಾದ ಸರ್ವ ರಾಜಮಂಡಲಕ್ಕೂ ನಮಸ್ಕಾರ ಮಾಡುತ್ತೇನೆ.

ಎಲ್ಲರೂ— ಆಯುಷ್ಮಂತನಾಗು.

ದ್ರೋಣ— ಏನು ಹೇಳಿದನು, ಪೂಜ್ಯ ವಿರಾಟೇಶ್ವರ?

ಉತ್ತರ— ಆ ಪೂಜ್ಯನು ನನ್ನನ್ನು ಕಳುಹಲಿಲ್ಲ

ದ್ರೋಣ— ಹಾಗಾದರ ಮತ್ತಾರು ನಿನ್ನನ್ನು ಕಳುಹಿದವರು?

ಉತ್ತರ— ಪೂಜ್ಯ ಯುಧಿಷ್ಠಿರ

ದ್ರೋಣ— ಏನು ಹೇಳಿದನು ಧರ್ಮರಾಜ?

ಉತ್ತರ— ಲಾಲಿಸಬೇಕು.

ನೊಸೆಯಾಗಿ ದೊರೆತಳುತ್ತರ ನನಗೆ ಇದಿನೋಡಿ
ಕಾಯುವೆನು ರಾಜಮಂಡಲವ
ಅಲ್ಲಿಯೋ, ಇಲ್ಲಿಯೋ ಮದುವೆ ಮಂಗಳವಪ್ಪು
ದೆಲ್ಲಿ ನಡಸುವುದದನು? ಜೆಸಸಿ || ೨೩ ||

ಶಕುನಿ— ಅಲ್ಲಿಯೇ, ಅಲ್ಲಿಯೇ.

ದ್ರೋಣ— ನೆಲೆಗೆ ಬಂದೆವು ನಾವು. ಪಂಚರಾತ್ರವುಮಿಹುದು
ಧರ್ಮವಗಲದ ಭಿಕ್ಷೆ. ಧರ್ಮದಿಂದಲೆ ಕೊಡುವುದು. ||೨೪||

ದುರ್ಯೋಧನ— ನಿಜ, ಕೊಟ್ಟೆ ನಾಡ ಪಾಂಡರಿಗಾನ್ ಮೊದಲಂತೆ.
ಸತ್ಯ ನಿಲ್ಲಲು ನರರು ಸತ್ತರೂ ನಿಲ್ವರೆಂದುಂ. ॥ ೨೫ ॥

ದ್ರೋಣ— ಆಹ! ತಣಿದೆವು ನಾಂಗಳೆಲ್ಲರು,
ಬೆಳೆದು ಕುಲದವರ್ ಕೂಡಿಕೊಂಡು.
ನೆಲವನಿದನೆಲ್ಲವನು ನಮ್ಮಯ
ರಾಜಸಿಂಹನೆ ಆಳಲಿ. ॥ ೨೬ ॥

( ಎಲ್ಲರೂ ಹೋಗುತ್ತಾರೆ )

**ಮೂರನೆಯ ಅಂಕ ಮುಗಿಯಿತು.**

ಪಂಚರಾತ್ರ ಮುಗಿಯಿತು

೨೦೦–ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬಂಗಳೂರು ನಗರ–೫–೧೯೪೬

# ಅಭಿಪ್ರಾಯಗಳು

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಪ್ರೊಫೆಸರಾಗಿದ್ದು ವಿಶ್ರಾಂತಿ ಹೊಂದಿರುವ ಶ್ರೀ. ಎಂ. ಹಿರಿಯಣ್ಣ, ಎಂ ಎ., ಎಲ್.ಟಿ., ಅವರ ಅಭಿಪ್ರಾಯ:

"Bhāsa's minor plays are not always quite intelligible and I can easily imagine what an amount of trouble their rendering should have meant to you. I find the result extremely satisfactory and you have very well succeeded in preserving in your trnaslation the charm and simplicity characteristic of Bhāsa."

* * * *

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಪ್ರೊಫೆಸರಾಗಿರುವ ಶ್ರೀ. ಆರ್. ವಿ. ಜಾಗಿರದಾರ, ಎಂ.ಎ. (ಲಂಡನ್), ಎಂ. ಆರ್. ಎ.ಎಸ್., ಅವರು ಹೀಗೆ ಹೇಳಿದ್ದಾರೆ:

"'ಭಾಷಾಂತರ ಮಾಡುವಾಗ ಇರುವುದನ್ನು ಬಿಡದೆ, ಇಲ್ಲದ್ದನ್ನು ಸೇರಿಸದೆ ಮೂಲಗ್ರಂಥ ಹೇಗಿದೆಯೊ ಹಾಗೆಯೆ ಪ್ರತಿಬಿಂಬಿಸಬೇಕೆಂಬುದು ನನ್ನ ಗುರಿ' ಎಂದು ಶ್ರೀಯುತ ಎಲ್. ಗುಂಡಪ್ಪನವರು ಮುನ್ನುಡಿಯಲ್ಲಿ ಹೇಳಿದುದು ಸಮಂಜಸವಾದ ವಿಚಾರ. ಆ 'ಗುರಿಯು' ಬಹುಮಟ್ಟಿಗೆ ಇಲ್ಲಿ ಸಾಧಿಸಿದೆ ಎಂದು ಹೇಳಬಹುದು. 'ದೂತವಾಕ್ಯ'ದಲ್ಲಿ 'ದೂತ ಘಟೋತ್ಕಚ'ದಲ್ಲಿ ಮತ್ತು ಕೆಲಮಟ್ಟಿಗೆ 'ಊರುಭಂಗ' 'ಕರ್ಣಭಾರ'ಗಳಲ್ಲಿ ಭಾಸಕವಿಯ ಶೈಲಿಯಲ್ಲಿರುವ ಪ್ರೌಢಿಯೂ ಪ್ರಸಾದವೂ ಇಲ್ಲಿ ಮೂಡಿದೆ ಎಂದು ಹೇಳಬಹುದು. ಒಟ್ಟಾರೆ ಭಾಸ ಮಹಾಕವಿಯನ್ನು ಕನ್ನಡಿಗರ ಮುಂದಿರಿಸುವ ಕೈಚಳಕವು ಎಲ್. ಗುಂಡಪ್ಪನವರಲ್ಲಿ ಇದೆ ."

# ಈ ಲೇಖಕರ ಇತರ ಗ್ರಂಥಗಳು

**ಭಾಸನ ಏಕಾಂಕ ನಾಟಕಗಳು.** ಭಾರತ ಕಥೆಯನ್ನು ಚಿತ್ರಿಸಲು **ಭಾಸನು** ರಚಿಸಿರುವ ಐದು ಏಕಾಂಕ ನಾಟಕಗಳ ಸಂಗ್ರಹ. ಬೆಲೆ: ರೂ. ೧-೪-೦

**ಪ್ರತಿಜ್ಞಾ ಯೌಗಂಧರಾಯಣ** ಸೆರಸಿಕ್ಕಿದ ವತ್ಸರಾಜನನ್ನು ಬಿಡಿಸಿಕೊಂಡು ಬಂದ ಮಂತ್ರಿ ಯೌಗಂಧರಾಯಣನ ಬುದ್ಧಿಮಹಿಮೆಯನ್ನು ಚಿತ್ರಿಸುವ ನಾಟಕ.

"ಇದು ಭಾಸನ ಶ್ರೇಷ್ಠಗ್ರಂಥದ ಯಥಾವತ್ತಾದ ಭಾಷಾಂತರವಾಗಿರುವುದೂ ಅಲ್ಲದೆ ಈ ಗ್ರಂಥಕ್ಕೆ ತನ್ನದೇ ಆದ ಒಂದು ಸಾಹಿತ್ಯಗುಣವೂ ಇದೆ. ಓದುಗರು ಸನ್ನಿವೇಶಗಳನ್ನು ಅರಿತುಕೊಳ್ಳುವುದಕ್ಕೂ, ಸಂವಾದಗಳ ಸೂಕ್ಷ್ಮಭಾವಗಳನ್ನು ಗ್ರಹಿಸುವುದಕ್ಕೂ ಸಹಾಯವಾಗುವಂತೆ ವಿಸ್ತಾರವಾದ ಟಿಪ್ಪಣಿಗಳನ್ನು ಕೊಟ್ಟಿದ್ದಾರೆ. ಈ ಗ್ರಂಥ ಸಾಹಿತಿಗಳಿಗೆ ಹೇಗೋ ಹಾಗೆ ಸಾಮಾನ್ಯ ವಾಚಕರಿಗೂ ಸ್ವಾರಸ್ಯವಾಗಿ ಬಹು ಬೆಲೆಯುಳ್ಳದ್ದಾಗಿದೆ."— **ಹಿಂದೂ ಪತ್ರಿಕೆ** ಬೆಲೆ ೧೦ ಆಣೆ.

**ಚಾರುದತ್ತ** ಇದು ಪುರಾತನ ಭರತಖಂಡದ ಒಂದು ಸಾಮಾಜಿಕ ನಾಟಕ. ಹುಟ್ಟಿನಲ್ಲಿ ಬ್ರಾಹ್ಮಣನೂ ವೃತ್ತಿಯಲ್ಲಿ ವೈಶ್ಯನೂ ಆದ ದರಿದ್ರ ಚಾರುದತ್ತನಿಗೂ ರೂಪ ಗುಣ ಶೀಲ ಸಂಪನ್ನೆಯಾದ ಉಜ್ಜಯಿನಿಯ ವೇಶ್ಯೆ ವಸಂತಸೇನೆಗೂ ಉಂಟಾದ ಪ್ರೇಮದ ಪರಿಯನ್ನು ಇದರಲ್ಲಿ ಭಾಸ ಚಿತ್ರಿಸಿದ್ದಾನೆ. ಶೂದ್ರಕನ ಮೃಚ್ಛಕಟಿಕಕ್ಕೆ ಈ ಚಾರುದತ್ತ ಆಧಾರವೆಂದು ಅಭಿಪ್ರಾಯವಿದೆ. ಬೆಲೆ: ೮ ಆಣೆ.

**ವಾಸವದತ್ತ**: ಅಚ್ಚಿನಲ್ಲಿ.

**ಟಾಲ್‌ಸ್ಟಾಯವರ ಕಥೆಗಳು** ರಷ್ಯದ ಪ್ರಸಿದ್ಧಸಾಹಿತಿಯೂ ಪರಮಸಾಧುವೂ ಆದ ಕೌಂಟ್ ಲಿಯೋ ಟಾಲ್‌ಸ್ಟಾಯವರ ವಿಚಾರಪ್ರಚೋದಕವಾದ ಇಪ್ಪತ್ತು ಕಥೆಗಳ ಸಂಗ್ರಹ. ಬೆಲೆ: ಸಾದಾಪ್ರತಿ ರೂ. ೧-೮-೦ ; ಕ್ಯಾಲಿಕೊ ಪ್ರತಿ ರೂ. ೨-೦-೦.

**ನಾಲ್ಮಣಿ ಕಡುಕು**: ಸಂಘಕಾಲದ ಪುರಾತನ ತಮಿಳು ಸಾಹಿತ್ಯಕ್ಕೆ ಸೇರಿದ 'ನಾನ್ ಮಣಿಕ್ಕಡಿಗೈ' ಎಂಬ ನೀತಿಶತಕದ ಭಾಷಾಂತರ. ಬೆಲೆ ೩ ಆಣೆ

**ಕನ್ನಡ ಸಾಹಿತ್ಯ ಚಿತ್ರಗಳು.** (ಮೊದಲನೆಯ ನಾಲು ಕಥೆಗಳು) ಪ್ರಾಚೀನ ಕನ್ನಡ ಸಾಹಿತ್ಯವನ್ನು ಜನಸಾಮಾನ್ಯಕ್ಕೆ ಪರಿಚಯ ಮಾಡಿಕೊಡುವ ಪುಸ್ತಕ. ಇದನ್ನು ಕುರಿತು ಪ್ರಸಿದ್ಧ ವಿದ್ವಾಂಸರಾದ ಶ್ರೀ. ಎಂ. ಗೋವಿಂದ ಪೈ ಅವರು ಹೀಗೆ ಹೇಳಿದ್ದಾರೆ:

"ಕಥೆಗಳನ್ನು ಓದಿ ನೋಡಿದೆ. ಬಲು ಚೆನ್ನಾಗಿವೆ. ಶೈಲಿ ತುಂಬ ಸೊಗಸಾಗಿದೆ. ಕಿರಿಯ ಮಕ್ಕಳೇ ಅಲ್ಲ, ಹಿರಿಯ ಮಕ್ಕಳೂ ಓದಿ ಆನಂದಿಸಬೇಕು. ಇಂಥ ಸ್ವಾದಿಷ್ಠವಾದ ಸಾಹಿತ್ಯವನ್ನು ಒದಗಿಸಿಕೊಟ್ಟ ತಮ್ಮನ್ನು ಮನವಾರೆ ಅಭಿನಂದಿಸುತ್ತೇನೆ."

ಬೆಲೆ: ರೂ. ೧-೪-೦

